# ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದಲ್ಲಿ ಕೊಪ್ಪಳ ಜಿಲ್ಲೆಯ ಶಿಬಿರಗಳು

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್. ಪ್ರಬಂಧ)

ಸಂಶೋಧಕ

**ಶರಣಪ್ಪ ವಿ. ಉಮಚಗಿ**

ಮಾರ್ಗದರ್ಶಕರು

**ಡಾ. ವಿರೂಪಾಕ್ಷಿ ಪೂಜಾರಹಳ್ಳಿ**



ಚರಿತ್ರೆ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

೨೦೦೪

# ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದಲ್ಲಿ ಕೊಪ್ಪಳ ಜಿಲ್ಲೆಯ ಶಿಬಿರಗಳು

(ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಎಂ.ಫಿಲ್. ಪ್ರಬಂಧ)

ಸಂಶೋಧಕ

**ಶರಣಪ್ಪ ವಿ. ಉಮಚಗಿ**

ಮಾರ್ಗದರ್ಶಕರು

**ಡಾ. ವಿರೂಪಾಕ್ಷಿ ಪೂಜಾರಹಳ್ಳಿ**



ಚರಿತ್ರೆ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

**ಕನ್ನಡ ವಿಶ್ವವಿದ್ಯಾಲಯ, ಹಂಪಿ**

ವಿದ್ಯಾರಣ್ಯ ೫೮೩ ೨೭೬

೨೦೦೪

# ಮಾರ್ಗದರ್ಶಕರ ದೃಢೀಕರಣ ಪತ್ರ

ಶ್ರೀ ಶರಣಪ್ಪ ವಿ.ಉಮಚಗಿ ಇವರು "ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದಲ್ಲಿ ಕೊಪ್ಪಳ ಜಿಲ್ಲೆಯ ಶಿಬಿರಗಳು" ಎಂಬ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು, ಈ ಮೊದಲು ಇವರು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ :

ಸ್ಥಳ : ವಿದ್ಯಾರಣ್ಯ

ಡಾ. ವಿರೂಪಾಕ್ಷಿ ಪೂಜಾರಹಳ್ಳಿ

ಅಧ್ಯಾಪಕರು ಹಾಗೂ ಮಾರ್ಗದರ್ಶಕರು

ಚರಿತ್ರೆ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಸಂಶೋಧಕನ ಪ್ರಮಾಣ ಪತ್ರ

"ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದಲ್ಲಿ ಕೊಪ್ಪಳ ಜಿಲ್ಲೆಯ ಶಿಬಿರಗಳು" ಎಂಬ ಪ್ರಬಂಧವನ್ನು ಡಾ.ವಿರೂಪಾಕ್ಷಿ ಪೂಜಾರಹಳ್ಳಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ಪ್ರಬಂಧವು ಮೂಲವಾಗಿದ್ದು, ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : 10-07-08
ಸ್ಥಳ : ವಿದ್ಯಾರಣ್ಯ

ಶರಣಪ್ಪ ವಿ.ಉಮಚಗಿ
ಸಂಶೋಧಕ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಕೃತಜ್ಞತೆಗಳು

ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದಲ್ಲಿ ಕೊಪ್ಪಳ ಜಿಲ್ಲೆಯ ಶಿಬಿರಗಳು ಎಂಬ ಪ್ರಬಂಧ ವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್. ಪದವಿಯ ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟ, ಹಿಂದಿನ ಮಾನ್ಯ ಕುಲಪತಿಗಳಾದ ಡಾ.ಎಚ್.ಜೆ.ಲಕ್ಕಪ್ಪಗೌಡ, ಈಗಿನ ಪ್ರಭಾರ ಕುಲಪತಿಗಳು, ಕುಲಸಚಿವರು ಆಗಿರುವ ಡಾ.ಕೆ.ವಿ.ನಾರಾಯಣ ಅವರುಗಳಿಗೆ,

ಅಧ್ಯಯನಾಂಗದ ನಿರ್ದೇಶಕರಾದ ಡಾ.ಕರಿಗೌಡ ಬೀಚನಹಳ್ಳಿ ಹಾಗೂ ಚರಿತ್ರೆ ವಿಭಾಗದ ಹಿಂದಿನ ಮುಖ್ಯಸ್ಥರಾದ ಡಾ.ಟಿ.ಪಿ.ವಿಜಯ್, ಈಗಿನ ಮುಖ್ಯಸ್ಥರಾದ ಡಾ.ಸಿ.ಆರ್.ಗೋವಿಂದರಾಜು ಅವರುಗಳಿಗೆ. ನನ್ನ ಅಧ್ಯಯನದುದ್ದಕ್ಕೂ ಪ್ರಬಂಧದ ಬಗ್ಗೆ ತಿದ್ದಿ, ತಾಳ್ಮೆಯಿಂದ ಮಾರ್ಗದರ್ಶನ ಮಾಡಿದ ಗುರುಗಳಾದ ಡಾ.ವಿರೂಪಾಕ್ಷಿ ಪೂಜಾರಹಳ್ಳಿ ಅವರಿಗೆ, ಹಾಗೂ ನನಗೆ ಅಧ್ಯಯನದುದ್ದಕ್ಕೂ ಸಂಶೋಧನಾಪೂರ್ವ ಆಯಾಮಗಳ ಕುರಿತು ಬೋಧಿಸಿ, ನನ್ನ ಸಂಶೋಧನೆಗೆ ಸಲಹೆ ಸೂಚನೆಗಳನ್ನು ನೀಡಿದ ಗುರುಗಳಾದ ಪ್ರೊ.ಲಕ್ಷ್ಮಣ್ ತೆಲಗಾವಿ, ಶ್ರೀ ಮೋಹನ ಕೃಷ್ಣ ರೈ, ಡಾ.ಚಿನ್ನಸ್ವಾಮಿ ಸೋಸಲೆ ಅವರುಗಳಿಗೆ, ಅದೇ ರೀತಿ ಡಾ.ಎಫ್.ಟಿ.ಹಳ್ಳಿಕೇರಿ, ಡಾ.ಅಮರೇಶ ನುಗಡೋಣಿ, ಡಾ.ಸಿ.ಮಹದೇವ, ಡಾ.ಕೆ.ಎಂ.ಸುರೇಶ್ ಅವರುಗಳಿಗೆ,

ನನ್ನ ಸಂಶೋಧನ ಅಧ್ಯಯನ ಸಂದರ್ಭದಲ್ಲಿ ನನ್ನ ಹಲವಾರು ಸಮಸ್ಯೆಗಳಿಗೆ ಮುಕ್ತವಾದ ಸಲಹೆ, ಸೂಚನೆಗಳನ್ನು ನೀಡಿ ನನ್ನ ಕ್ಷೇತ್ರಕಾರ್ಯಕ್ಕೆ ಇನ್ನಷ್ಟು ಸ್ಫೂರ್ತಿ ತುಂಬಿದ ಆತ್ಮೀಯರು, ಹಿರಿಯರೂ, ಲೇಖಕರು ಆದ ಶ್ರೀ.ಎಚ್.ಎಸ್.ಪಾಟೀಲ್‌ರವರನ್ನು ಹಾಗೂ ಡಾ.ಆರ್.ಎಂ.ಪಾಟೀಲ್, ಗುರುಗಳಾದ ಪ್ರೊ.ಅಲ್ಲಮಪ್ರಭು ಬೆಟ್ಟದೂರ, ರಾಜಶೇಖರ ಪಾಟೀಲ್, ವ್ಹಿ.ಬಿ.ರಡ್ಡೇರ್, ಎಂ.ಎಸ್. ಸಜ್ಜನ್, ಜಗದೀಶ ಬ್ಯಾಲಹುಣಸಿ ಅವರುಗಳಿಗೆ, ಆತ್ಮೀಯರಾದ ರಮೇಶ, ಕೃಷ್ಣಾ ಹಾಗು ಸರ್ವರೀತಿಯಲ್ಲೂ ಹುರಿದುಂಬಿಸಿದ ನನ್ನ ಬಾಲ್ಯದ ಗುರುಗಳಾದ ನೀಲಪ್ಪ ಮಾಸ್ತರವಕ್ರ, ನಿಂಗಪ್ಪ ಬಡೀಗೇರ್‌ಅವರುಗಳಿಗೆ, ನನ್ನ ಶೈಕ್ಷಣಿಕ ಪ್ರಪಂಚದ ಮೊದಲ ಅಕ್ಷರ ಕಲಿಸಿದ ದಿ.ಸೀನಪ್ಪಾಚಾರ್ ಜೋಶಿ.ಇವರುಗಳಿಗೆ,

ಸಂಶೋಧನ ವಿಧಾನಗಳ ಬಗ್ಗೆ ಮುಕ್ತವಾಗಿ ಸಲಹೆ ಸಹಕಾರ ನೀಡಿದ ಆತ್ಮೀಯರಾದ ಡಾ.ಜಾಜಿ, ದೇವೇಂದ್ರಪ್ಪ, ಸಂಶೋಧನಾ ಗೆಳೆಯರಾದ ಜಗದೀಶ ನಾಯಕ, ಬೆಂಕ್ಯಾನಾಯ್ಕು, ಸಿದ್ದಣ್ಣ ನಲ್ಲಾರೆಡ್ಡಿ, ಗುರುರಾಜ, ತಿಪ್ಪೇಸ್ವಾಮಿ, ಶಿವುಕುಮಾರ, ವೆಂಕಟರಮಣ, ಉಮೇಶ ಗುರಿಕಾರ, ದೇವರಾಜ, ಅಜೇಯ, ರೋಜಾ, ನಿಸ್ಸಾರ, ಇಸ್ಮಾಯಿಲ್, ನಿರಂಜನ, ನಿಂಗಪ್ಪ, ನಲ್ಮೆಯರಾದ ಭಾಸ್ಕರ ಶೆಟ್ಟಿ, ರೇಣುಕಾ, ಸಂತೋಷ, ಭದ್ರಣ್ಣ, ಗಂಗಣ್ಣ ಅವರುಗಳಿಗೆ, ಅದೇ ರೀತಿ ಗಾದೆಪ್ಪ, ಷಣ್ಮುಖಪ್ಪ, ಉಮೇಶ, ಅರುಣ್ ಜೋಳದ್, ಚಂದ್ರು, ಪವಾರ್, ದುರ್ಗಾ ಪ್ರವೀಣ, ಗಜಾನನ, ಕೃಷ್ಣವೇಣಿ, ಸುನಂದಾ, ಸುಮಂಗಲಾ, ಪಾರ್ವತಿ, ವಿಜಯಲಕ್ಷ್ಮಿ, ಹಾಗೂ ನನ್ನ ಇನ್ನಿತರ ಸಹಪಾಠಿಗಳಿಗೆ, ಆತ್ಮೀಯರಾದ ಶ್ರೀಲತಾ ಹಡಗಲಿ ಅವರುಗಳಿಗೆ,

ಮಗನ ಏಳ್ಗೆಗಾಗಿ ಹಗಲಿರುಳು ಶ್ರಮಿಸುತ್ತಿರುವ ಪೂಜ್ಯನೀಯ ನನ್ನ ತಂದೆ ತಾಯಿಗಳಿಗೆ, ಸಹೋದರನ ಯಶಸ್ಸನ್ನೇ ಬಯಸುತ್ತಿರುವ ನನ್ನ ಎಲ್ಲಾ ಅಕ್ಕಂದಿರಿಗೆ, ತಂಗಿಯರಿಗೆ, ಮಾವಂದಿರಿಗೆ, ನನ್ನ ಗ್ರಾಮದ ಎಲ್ಲಾ ನಾಗರಿಕರಿಗೂ, ಯುವಮಿತ್ರರಿಗೂ, ಶಿಷ್ಯಮಿತ್ರರಿಗೆ,

ನನ್ನ ಸಂಶೋಧನ ಕಾರ್ಯಕ್ಕೆ ಹರ್ಷವ್ಯಕ್ತಪಡಿಸಿ, ಹಾರೈಸಿ, ಆಶೀರ್ವದಿಸಿದ ಪದವಿ ತರಗತಿಯ ಸಹಪಾಟಿಗಳಾದ ಸದ್ಯ ಕೊಪ್ಪಳ ಗವಿಮಠ ಸಂಸ್ಥಾನದ ಅಭಿನವ ಮಹಾಸ್ವಾಮಿಗಳಿಗೆ ಭಕ್ತಿಯ ಕೃತಜ್ಞತೆಗಳು. ಸಹೋದರತ್ವದ ಪ್ರತಿರೂಪದಂತಿರುವ ಆತ್ಮೀಯರಾದ ದೀಪಾ, ಕಾಂಚನಾ, ಪ್ರತಿಭಾ, ಲಲಿತಾ, ಶಿಲ್ಪಾ, ಗೀತಾ, ಭಾಗ್ಯ, ವೀಣಾ ಹಾಗೂ ನನ್ನ ಬಾಲ್ಯದ ನಲ್ಮೆಯ ಗೆಳೆಯರಾದ ಹನುಮಂತ್ ಎನ್.ಉಪ್ಪಾರ, ವಿರೇಶ ಮ್ಯಾಗಳೇಶಿ, ಮಂಗಳೇಶ ಯತ್ನಟ್ಟಿ, ಚಾಂದು ಹಾಗೂ ಮುತ್ತು ಪಾಟೀಲ್ ಇನ್ನಿತರ ನನ್ನ ಹಿರಿಯ, ಕಿರಿಯ ಗೆಳೆಯರಿಗೆ, ಅದರಂತೆ ಬೆನ್ನು ತಟ್ಟಿ ನನ್ನ ಸಂಶೋದನಾ ಕಾರ್ಯಕ್ಕೆ ಸರ್ವರೀತಿಯಿಂದಲೂ ಸಹಕಾರ, ಸಲಹೆ ನೀಡಿದ ಹಿರಿಯ ಲೇಖಕರಾದ ಸಾಹಿತಿ ಶರಣಗೌಡ ಯರದೊಡ್ಡಿ, ಪತ್ರಕರ್ತರಾದ ಕೊಟ್ರಪ್ಪ ತೋಟದ, ದೂರವಾಣಿ ಮೂಲಕ ಸವಿಸ್ತಾರವಾದ ಸಲಹೆ ನೀಡಿದ ಲೇಖಕರು, ರಾಷ್ಟ್ರ ಪ್ರಶಸ್ತಿ ವಿಜೇತ ಶಿಕ್ಷಕರಾದ ಶ್ರೀ ರಾಮಣ್ಣ ಹವಳೆ ಹಾಗೂ ಎಲ್ಲಾ ರೀತಿಯಿಂದಲೂ ನನ್ನ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಸಹಕರಿಸಿ ಸುದೀರ್ಘ ಮಾಹಿತಿಕೊಟ್ಟ ನನ್ನ ಜಿಲ್ಲೆಯ ಎಲ್ಲಾ ವಿಮೋಚನ ಹೋರಾಟಗಾರರಿಗೆ,

ನನ್ನ ಸಂಶೋಧನ ಅಧ್ಯಯನಕ್ಕೆ ಸ್ಫೂರ್ತಿ ನೀಡಿದ ಮಾಧ್ಯಮ ಮಿತ್ರರಾದ ಎಂ.ಎನ್.ಸೌದಾಗರಂ, ರುದ್ರಪ್ಪ ಭಂಡಾರಿ, ದೇಸಾಯಿ ಮತ್ತು ಉದಯ ಟಿ.ವಿ. ವರದಿಗಾರರಾದ ಮಂಜುನಾಥ ಡೊಳ್ಳಿನ ಅವರಿಗೆ, ಅದೇ ರೀತಿ ಗ್ರಂಥಗಳ ಬಗಗೆ ಮಾಹಿತಿಕೊಟ್ಟ ಶ್ರೀ ಬಿ.ಆರ್.ತುಬಾಕಿಯವರಿಗೆ,

ಸಕಾಲಕ್ಕೆ ಗ್ರಂಥಗಳನ್ನು ಒದಗಿಸಿದ ಗ್ರಂಥಾಲಯದ ಮುಖ್ಯಸ್ಥರಿಗೂ ಗ್ರಂಥಾಲಯದ ಸಿಬ್ಬಂದಿಗಳಾದ ಶ್ರೀ ಗುಡಿಮನಿ, ರಾಜಕುಮಾರ್, ಮಲ್ಲಿಕಾರ್ಜುನ, ಸುಹಾಸ್, ರೇಖಾ ಭೋಜಶೆಟ್ಟರ್, ಸೋಮಶೇಖರ, ಖಾದರ್ ಭಾಷ್, ಸತ್ಯನಾರಾಯಣರವರಿಗೆ, ಅದೇ ರೀತಿ ಚರಿತ್ರೆ ವಿಭಾಗದ ಭೋದಕೇತರ ಸಿಬ್ಬಂದಿಯವರಾದ ಶ್ರೀ ಗಾದಿಲಿಂಗಪ್ಪ, ಗಂಗಾಧರ ಅವರುಗಳಿಗೆ,

ಅಂದವಾಗಿ ಅಕ್ಷರ ಜೋಡಣೆ ಮತ್ತು ಪುಟ ವಿನ್ಯಾಸ ಮಾಡಿಕೊಟ್ಟ ಹೊಸಪೇಟೆಯ ಯಾಜಿ ಗ್ರಾಫಿಕ್ಸ್‌ನ ಸವಿತಾ ಯಾಜಿ ಮತ್ತು ಗಣೇಶ ಯಾಜಿಯವರಿಗೆ,

ನನ್ನ ಹೃದಯಪೂರ್ವಕ ಕೃತಜ್ಞತೆಗಳು ಸಲ್ಲುತ್ತವೆ.

ಶರಣಪ್ಪ ವಿ. ಉಮಚಗಿ


ಪರಿವಿಡಿ

ಹೈದರಾಬಾದ್ ಸಂಸ್ಥಾನವು, ಭಾರತದ ೫೫೬ ಸಂಸ್ಥಾನಗಳಲ್ಲೆ ಅತ್ಯಂತ ದೊಡ್ಡದು, ಹಾಗೂ ಶ್ರೀಮಂತ ವಾದುದಾಗಿತ್ತು. ಅಲ್ಲಿದ್ದ ಆಡಳಿತದ ವ್ಯವಸ್ಥೆಯು ನಿರಂಕುಶ ಸಾರ್ವಭೌಮ ಸ್ವರೂಪದ್ದಾಗಿತ್ತು. ನಿಜಾಂ ಸಂಸ್ಥಾನದಲ್ಲಿ ಬ್ರಿಟಿಷರು ತಮ್ಮದೆ ಆದ ಆಡಳಿತ ಧೋರಣೆ ರೂಢಿಸಿಕೊಂಡಿದ್ದರಿಂದ, ನಿಜಾಂನ ಆಳ್ವಿಕೆಯ ಅದಕ್ಷ, ಅರಾಜಕತೆಯ ಪರಮಾವಧಿಯಾಗಿತ್ತು. ಹೈದರಾಬಾದ್ ಕರ್ನಾಟಕ ಪ್ರಾಂತ್ಯಕ್ಕೆ ಒಳಪಟ್ಟ ಜಿಲ್ಲೆಗಳಾದ ಬೀದರ, ಗುಲ್ಬರ್ಗಾ, ರಾಯಚೂರು ಹಾಗು ನವಾಬ ಸಾಲರಜಂಗನ ಜಹಗೀರು ಜಿಲ್ಲೆಯಾದ ಕೊಪ್ಪಳದ ಪರಿಸ್ಥಿತಿಯು ತೀರಾ ಶೋಚನೀಯವಾಗಿತ್ತು. ಏಕೆಂದರೆ ಈ ಭಾಗದಲ್ಲಿ ಬ್ರಿಟಿಷರ, ನಿಜಾಂರ, ಜಹಗೀರುದಾರರ ಮೂರು ರೀತಿಯ ಅಧಿಕಾರಗಳು ಜನತೆಯ ಮೇಲಿತ್ತು. ಹೀಗಾಗಿ ಇಲ್ಲಿನ ಜನತೆ ನಿಜಾಂನ ಆಡಳಿತದಿಂದ ಬೇಸತ್ತು ಹೋಗಿತ್ತು. ಹೈದರಾಬಾದ್ ಸಂಸ್ಥಾನದ ಸಂಸ್ಥಾಪಕನಾದ ಮೀರ್‌ಕಮುರುದ್ದೀನ್ ಕಿಲೀಚ್‌ಖಾನ್ ನಿಂದ ಕೊನೆಯ ನಿಜಾಂನಾದ ಮೀರ್ ಉಸ್ಮಾನ್ ಅಲಿಖಾನ್ ಬಹದ್ದೂರನ ಆಳ್ವಿಕೆ ಕಾಲದಲ್ಲಿ ಹೈದರಾಬಾದ್ ಸಂಸ್ಥಾನದ ಪ್ರದೇಶಗಳು, ಸಾಮಾಜಿಕ ವಿಷಮತೆ, ರಾಜಕೀಯ ಅವ್ಯವಸ್ಥೆ, ಆರ್ಥಿಕ ಶೋಷಣೆ ಹಾಗೂ ಧಾರ್ಮಿಕ ಅತ್ಯಾಚಾರಕ್ಕೆ ಒಳಪಟ್ಟು ಅರಾಜಕತೆಯ ಹಾದಿ ಹಿಡಿದಿದ್ದವು. ಈ ನಿಜಾಂರು ಸಂಸ್ಥಾನಕ್ಕೆ ಒಡೆಯ ರಾದರೇ ವಿನಃ ಬುದ್ಧಿವಂತ, ದಕ್ಷ ಆಡಳಿತಗಾರರಾಗಲಿಲ್ಲ. ತನ್ಮೂಲಕ ಹೈದರಾಬಾದ್ ಸಂಸ್ಥಾನಕ್ಕೆ ಒಳಪಟ್ಟ ಕರ್ನಾಟಕದ ಈ ಜಿಲ್ಲೆಯ ಪರಿಸ್ಥಿತಿಗಳು ತೀರ ಸಂಕಷ್ಟದ ಸ್ಥಿತಿಯನ್ನು ತಲುಪಿ ವಿಪ್ಲವ ಹಾದಿ ಹಿಡಿದಿದ್ದವು. ಈ ಶೋಚನೀಯ ಪರಿಸ್ಥಿತಿಯ ಸಂದರ್ಭಗಳೇ ಮುಂದೆ ಈ ಭಾಗದ ಜನತೆಯು ಸಾಂಘಿಕವಾಗಿ ಸೇರಿ, ಶಿಬಿರಗಳ ಮೂಲಕ ಹೋರಾಡಲು ಸಿದ್ದವಾಯಿತು.

ನಿಜಾಂ ಉಲ್-ಮುಲ್ಕ್- ಫೀರೋಜ್‌ಜಂಗ್ ಎಂಬ ಬಿರುದನ್ನು ಹೊಂದಿದ ಮೀರ್‌ಕಮುರುದ್ದೀನ್ ಬಿನ್ ಕಿಲೀಚ್‌ಖಾನನು ಹೈದರಾಬಾದ್ ನಿಜಾಂ ವಂಶದ ಸ್ಥಾಪಕನಾಗಿದ್ದಾನೆ. ಈತನಿಗೆ ದೆಹಲಿಯ ಮೊಗಲ್ ಸಾಮ್ರಾಟ ಮಹ್ಮದಶಾಹಿ ಎಂಬುವವನು 'ಅಸಫ್‌ಜಹಾ' ಎಂಬ ಬಿರುದನ್ನು ನೀಡಿದ್ದರಿಂದ ಈ ಮನೆತನಕ್ಕೆ 'ಅಸಫ್‌ಜಹಾ' ಎಂದು ಕರೆಯುತ್ತಾರೆ. ಕ್ರಿ.ಶ. ೧೭೪೮ರಲ್ಲಿ ಆರಂಭವಾದ ನಿಜಾಂ ವಂಶದ ಈ ಮೂಲ ಪುರಷನಿಗೆ ನಾಲ್ಕು ಜನ ಮಕ್ಕಳಿದ್ದರು. ಮೀರ್ ಸಲಾಬತ್‌ಜಂಗ್, ಮೀರ್ ಮಹ್ಮದಖಾನ್, ನಾಸಿರ್‌ಜಂಗ್,

ಮೀರ್ ನಿಜಾಂಅಲಿ ಅವರಲ್ಲಿ ನಾಸಿರ್‌ಜಂಗನೆಂಬುವವನು ತಂದೆ ಜೀವಂತವಿದ್ದಾಗ ಆತನ ವಿರುದ್ಧ ಬಂಡೆದ್ದು ಅವನ ರಾಜ್ಯದಲ್ಲಿ ಗೊಂದಲವನ್ನುಂಟು ಮಾಡತೊಡಗಿದ್ದ. ಆದರೆ ಹಿರಿಯ ಮಗನಾದ ಸಲಾಬತ್ ಜಂಗನು ಫ್ರೆಂಚರ ಸಹಾಯ ಪಡೆದು ೧೭೫೧ರಲ್ಲಿ ಈ ಸಂಸ್ಥಾನದ ಅಧಿಕಾರವನ್ನು ಪಡೆದನು. ಫ್ರೆಂಚರೊಂದಿಗಿನ ಸಲಾಬತ್‌ಜಂಗನ ಸಂಬಂಧವು ಬಹುಕಾಲ ಉಳಿಯದೇ ಇಬ್ಬಗೆಯ ನೀತಿಯಿಂದ ಫ್ರೆಂಚರು ನಿಜಾಂ ಉಲ್-ಮುಲ್ಕ್‌ನ ಅಣ್ಣನ ಮಗನಾದ ಮುಜಫರ್ ಜಂಗನನ್ನು ಹೈದರಾಬಾದ್ ಸಿಂಹಾಸನದ ಮೇಲೆ ಕೂಡಿಸುತ್ತಾರೆ. ಆದರೆ ಮುಜಫರ್ ಜಂಗನು ಪಾಂಡಿಚೇರಿಯಿಂದ ಮರಳಿ ಬರುವ ಕಾಲಕ್ಕೆ ಕೊಲ್ಲಲ್ಪಟ್ಟಾಗ, ಸಲಾಬತ್ ಜಂಗನು ಮತ್ತೆ ಫ್ರೆಂಚ್ ಸೇನಾಧಿಪತಿಯ ಸಹಾಯ ಪಡೆದು ಮತ್ತೆ ಅಧಿಕಾರಕ್ಕೆ ಬರುತ್ತಾನೆ. ಹೀಗೆ ಕ್ರಿ.ಶ. ೧೭೨೪ರವರೆಗೆ ಏಳು ಜನ ನಿಜಾಂರು ಪರಸ್ಪರ ಅಧಿಕಾರದ ದಾಹಕ್ಕೆ ಬಂಡೇಳುವದು ನಡೆಯುತ್ತಿತ್ತು. ತಮ್ಮ ಅಧಿಕಾರದ ಲಾಲಸೆ, ಇಬ್ಬಗೆ ನೀತಿಯ ಫಲವಾಗಿ ಕೊನೆಕೊನೆಗೆ ಬ್ರಿಟಿಷರ ಕೈವಶದಲ್ಲಿಯೇ ಆಡಳಿತ ನಡೆಸಬೇಕಾದಂತಹ ಪರಿಸ್ಥಿತಿ ತಲೆದೋರಿತು. ಕೊನೆಯ ಹೈದರಾಬಾದ್ ಸಂಸ್ಥಾನದ ನಿಜಾಂ ಅರಸನಾದ ಮೀರ್ ಉಸ್ಮಾನ್ ಅಲಿಖಾನ್ ಬಹದ್ದೂರ್ ಆಗಸ್ಟ್ ೨೯, ೧೯೧೧ರಲ್ಲಿ ಅಧಿಕಾರಕ್ಕೆ ಬಂದಾಗ ಇತನ ಅಧಿಕಾರದ ಪ್ರತಿಯೊಂದರಲ್ಲೂ ಬ್ರಿಟಿಷರ ಹಸ್ತಕ್ಷೇಪ ನಡೆಯುತ್ತಿತ್ತು. ಇದರ ಪರಣಾಮವೇ ನಿಜಾಂರು ರಾಜಕೀಯ, ಆರ್ಥಿಕ ಸುಧಾರಣೆಗಳನ್ನು ಕೈಗೊಳ್ಳುವಲ್ಲಿ ಮತ್ತು ಜಾರಿಗೊಳಿಸುವುದರಲ್ಲಿ ಯಾವುದೆ ಸ್ವಾತಂತ್ರ್ಯವನ್ನು ಪಡೆದಿರಲಿಲ್ಲ. ಹೀಗೆ ನಿಜಾಂನ ಮೂಲಕ ಬ್ರಿಟಿಷ್ ಪಾರುಪತ್ಯಕ್ಕೆ ಒಳಪಟ್ಟು ಹೈದರಾಬಾದ್ ಕರ್ನಾಕಟದ ಅಂದಿನ ಮೂರು ಜಿಲ್ಲೆಗಳಾದ ಬೀದರ್, ಗುಲ್ಬರ್ಗಾ, ರಾಯಚೂರು, ಪ್ರದೇಶಗಳು ಸಹ ನಿಜಾಂರ ನಿರಂಕುಶ ಆಡಳಿಕ್ಕೆ ಒಳಪಟ್ಟಿದ್ದವು. ಈ ಮೂಲಕ ನಿಜಾಂ ವಂಶದ ಕೊನೆಯ ಅರಸನಾದ ಮೀರ್ ಉಸ್ಮಾನ್ ಅಲಿಖಾನ್ ಆಳ್ವಿಕೆಯ ಅವಧಿಯಲ್ಲಿ ಅನೇಕ ಮುಸ್ಲಿಂ ಸಂಘಟನೆಗಳು ಜನ್ಮತಾಳಿದವು. ಅದರಲ್ಲಿ ರೂಪ ತಳೆದ 'ಮಜ್ಲಿಸ್-ಎ-ಇತ್ತೇಹಾದ್' ಉಲ್ ಮುಸಲ್ಮಾನ್ ಸಂಸ್ಥೆಯು 'ಕಾಶಿಂರಜ್ವಿ' ಎಂಬ ಕೋಮುವಾದಿ ಕ್ರಿಯಾತ್ಮಕ ಕಾರ್ಯಕರ್ತನಿಂದ ಸಂಸ್ಥಾಪನೆಗೊಂಡು ನಿಜಾಂನ ನಿಷ್ಠೆಗೆ ಪಾತ್ರವಾಯಿತು. ಇಲ್ಲಿಂದಲೇ ಹಿಂದೂಗಳ ಮೇಲೆ ದಬ್ಬಾಳಿಕೆ, ದುಷ್ಕೃತ್ಯಗಳು ಪ್ರಾರಂಭವಾದವು. ಇಲ್ಲಿನ ಸಾಮಾನ್ಯ ಜನತೆಯು ಇವರ ಅರಾಜಕತೆಯ ಆಳ್ವಿಕೆಯಿಂದ ರೋಸಿಹೊಯಿತು. ಹೈದರಾಬಾದ್ ಕರ್ನಾಟಕದ ಪ್ರದೇಶಗಳಲ್ಲಿ ಒಂದಾದ ಕೊಪ್ಪಳ ಪ್ರದೇಶದ ಜನರಂತೂ ಹೆಚ್ಚಿನ ತೊಂದರೆಗಳಿಗೆ ಒಳಗಾದರು. ಬೇರೆಲ್ಲರಂತೆ ಅವರು ಶೋಷಣೆಗೆ ಒಳಗಾಗಿದ್ದರ ಜೊತೆಗೆ ಅವರು ತೀವ್ರತರ ಸಾಂಸ್ಕೃತಿಕ ದಾಳಿಗೆ ತುತ್ತಾದರು. ಕೊಪ್ಪಳ ಜಿಲ್ಲೆಯ ಜನತೆಯು ಶೈಕ್ಷಣಿಕ ಸೌಲಭ್ಯಗಳಿಂದ ವಂಚಿತರಾಗಿ ಮತ್ತಷ್ಟು ಹಿಂದುಳಿಯಬೇಕಾಯಿತು. ಯಾವುದೇ ರೀತಿಯ ಬಹಿರಂಗ ರಾಜಕೀಯ, ಧಾರ್ಮಿಕ, ಸಮಾವೇಶ ಹಾಗೂ ಸಾರ್ವಜನಿಕ ಚಟುವಟಿಕೆಗಳನ್ನು ನಡೆಸಲು ಮುಕ್ತವಾದ ಅವಕಾಶವಿರಲಿಲ್ಲ. ಕ್ರಮೇಣ ಈ ಇತ್ತೇಹಾದ್ ಸಂಸ್ಥೆಯಿಂದ ರಾಕ್ಷಸಿ ಕೃತ್ಯಗಳು, ದಬ್ಬಾಳಿಕೆ, ಶೋಷಣೆಗಳು ಹೆಚ್ಚಾಗುತ್ತಾ ನಡೆದಂತೆ ಇತ್ತ ಕಾಶಿಂರಜ್ವಿಯ ಕೃತ್ಯಗಳು ನಿರಾಂತಕವಾಗಿ ನಡೆಯಲು ನಿಜಾಂನು ಸಂಪೂರ್ಣ

ಅಧಿಕಾರ ನೀಡಿ ತಾನು ವಿಲಾಸಿ ಪ್ರವೃತಿಯಲ್ಲಿ ಮೈಮರೆತನು. ಇದನ್ನೇ ಕಾರಣವನ್ನಾಗಿಟ್ಟುಕೊಂಡು ರಜಾಕಾರರು, ನಿಜಾಂರನ್ನು ತಮ್ಮ ರಾಜಕೀಯ ಧಾರ್ಮಿಕ ಹಿತಾಸಕ್ತಿಗಳನ್ನು ಪೂರೈಸಿಕೊಳ್ಳಲು ಕೈಗೊಂಬೆ ಮಾಡಿಕೊಂಡರು. ಕೊಪ್ಪಳ ಜಿಲ್ಲೆಯ ಅಳವಂಡಿ ಹಾಗೂ ಇನ್ನಿತರ ಗ್ರಾಮದ ಮಠಗಳ ಮೇಲೆ ದಾಳಿಗಳು ನಡೆದವು. ಅದಮ್ಯ ಅಸ್ಪಷ್ಟ ಹುಚ್ಚು ಹುಂಬುತನದಲ್ಲಿ ರಜಾಕಾರರು ಇಲ್ಲಿನ ಸಾಮಾನ್ಯ ಜನತೆಯ ಮೇಲೆ ದಬ್ಬಾಳಿಕೆ ನಡೆಸಲು ಪ್ರಾರಂಭಿಸಿದರು. ಇದನ್ನು ಮನಗಂಡು ಕೊಪ್ಪಳ ಜಿಲ್ಲೆಯ ವಿಮೋಚನ ಹೋರಾಟಗಾರರು ನಿಜಾಂನ ವಿರುದ್ಧ ಹೋರಾಡಲು ಮುಂದಾದರು. ಅದರಂತೆ ಅಲ್ಲಲ್ಲಿ ಗುಂಪು ಸಭೆಗಳನ್ನು ಮಾಡಿ, ಜಿಲ್ಲೆಯ ಗಡಿ ಭಾಗಗಳಲ್ಲಿ ಹಾಗು ಇಕ್ಕಟ್ಟಿನ ಪ್ರದೇಶಗಳಲ್ಲಿ ಶಿಬಿರಗಳನ್ನು ರಚಿಸಿ, ಇವುಗಳ ಮುಖಾಂತರ ನಿಜಾಂರ ಹಾಗೂ ರಜಾಕಾರರ ದಬ್ಬಾಳಿಕೆಗಳನ್ನು ಮಟ್ಟಹಾಕಲು ಯೋಜಿಸತೊಡಗಿದರು. ಕೆಚ್ಚೆದೆಯಿಂದ ಹೋರಾಟ ನಡೆಸಿ ಮತಾಂಧ ಹಾಗು ಅದಕ್ಷ ಶಕ್ತಿಗಳಿಂದ ಹೈದರಾಬಾದ್ ಕರ್ನಾಟಕ ಪ್ರದೇಶವನ್ನು ಮುಕ್ತಿಗೊಳಿಸಿದರು. ಆ ನಿಟ್ಟಿನಲ್ಲಿ ಕೊಪ್ಪಳ ಜಿಲ್ಲೆಯ ಹೋರಾಟದ ಹಂತಗಳನ್ನು ಶಿಬಿರಗಳ ಮೂಲಕ ವಿವರಿಸಲು ಪ್ರಯತ್ನ ಮಾಡಲಾಗಿದೆ.

# ಅಧ್ಯಾಯ ೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

ಭಾರತ ಬಹುದೊಡ್ಡ ಪ್ರಜಾಪ್ರಭುತ್ವ ರಾಷ್ಟ್ರ. ೨೮ ರಾಜ್ಯಗಳು, ೭ ಕೇಂದ್ರಾಡಳಿತ ಪ್ರದೇಶಗಳನ್ನು ಹೊಂದಿದೆ. ಸ್ವಾತಂತ್ರ್ಯನಂತರ ಭಾಷೆವಾರು ಆಧಾರ ಮೇಲೆ ರಾಜ್ಯಗಳನ್ನು ಪುನರ್ವಿಂಗಡನೆ ಮಾಡಲಾಯಿತು. ಹೀಗೆ ಕರ್ನಾಟಕವು ೧೯೫೬ ನವೆಂಬರ್ ೧ ರಂದು ಮೈಸೂರು ರಾಜ್ಯವಾಗಿ, ಮತ್ತೆ ೧೯೭೩ ನವೆಂಬರ್ ೧ ರಂದು 'ಕರ್ನಾಟಕ' ಎಂದು ನಾಮಕರಣಗೊಳಿಸಲಾಯಿತು. ೧೯೯೭ಕ್ಕಿಂತ ಮೊದಲು ಕರ್ನಾಟಕ ರಾಜ್ಯವು ೨೦ ಜಿಲ್ಲೆಗಳನ್ನು ಒಳಗೊಂಡಿತ್ತು. ಪ್ರಾದೇಶಿಕ ಅಸಮತೋಲನ ನಿವಾರಣೆಗಾಗಿ, ೧೯೯೭ ಆಗಸ್ಟ್ ೧೫ ರಂದು ಮತ್ತೆ ೭ ಜಿಲ್ಲೆಗಳು ಅಸ್ತಿತ್ವಕ್ಕೆ ಬಂದವು. ಹೊಸದಾಗಿ ಅಸ್ತಿತ್ವಕ್ಕೆ ಬಂದ ಜಿಲ್ಲೆಗಳಲ್ಲಿ ಕೊಪ್ಪಳವು ಒಂದು ಜಿಲ್ಲಾ ಕೇಂದ್ರವಾಗಿ ರಚನೆಯಾಯಿತು.

ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದಲ್ಲಿ ಈ ಕೊಪ್ಪಳ ಜಿಲ್ಲೆಯ ಪಾತ್ರ ಮಹತ್ವದ್ದಾಗಿದೆ. ೧೩ ತಿಂಗಳುಕಾಲ ನಿಜಾಂ ಹಾಗೂ ರಾಜಾಕಾರರ ವಿರುದ್ಧವಾಗಿ ಈ ಜಿಲ್ಲೆಯ ಜನರ ಹೋರಾಟ ಸ್ಮರಣೀಯ ವಾಗಿದೆ. ಇಲ್ಲಿನ ಹೋರಾಟಗಾರರು ಎಲೆ ಮರೆ ಕಾಯಿಯಂತೆ ಹೋರಾಟ ಮಾಡಿ ನಿಜಾಂರ ಕಪಿಮುಷ್ಠಿಯಿಂದ ಮುಕ್ತಿಗೊಳಿಸಿದ್ದಾರೆ. ಕೊಪ್ಪಳ ಜಿಲ್ಲೆಯ ವಿಮೋಚನ ಹೋರಾಟಗಾರರ ಹಾಗೂ ಮುಖಂಡರ ಸಾಧನೆಯ ಸಂಗತಿಗಳನ್ನು ಬೆಳಕಿಗೆ ತರುವ ಪ್ರಯತ್ನವನ್ನು ಪ್ರಸ್ತುತ ಅಧ್ಯಯನದ ಮೂಲಕ ಕೈಗೊಳ್ಳಲಾಗಿದೆ.

ಹೈದರಾಬಾದ್ ಪ್ರಾಂತ್ಯದ ರಾಜಕೀಯ ಚರಿತ್ರೆಯನ್ನು ಅವಲೋಕಿಸಿದರೆ, ಆಳರಸರು ಇಲ್ಲಿನ ಆಡಳಿತವನ್ನು ನಡೆಸುವದಕ್ಕಿಂತ, ದಬ್ಬಾಳಿಕೆ, ದರ್ಪಿಷ್ಠ ನಿರಂಕುಶ ಪ್ರಭುತ್ವಕ್ಕೆ ಹೆಚ್ಚಿನ ಆದ್ಯತೆ ನೀಡಿರುವದು, ಕಂಡು ಬರುತ್ತದೆ. ಅರಾಜಕತೆ ಶೋಷಣೆಯ ಕೇಂದ್ರವಾಗಿದ್ದ ಹೈದರಾಬಾದ್ ಸಂಸ್ಥಾನವು ನಿಜಾಂನ ಕಪಿಮುಷ್ಠಿ ಯಿಂದ ಅತಂತ್ರ ಹಾದಿಯತ್ತ ಸಾಗಿತ್ತು.

ಹೈದರಾಬಾದ್ ಪ್ರಾಂತವನ್ನು ಭಾರತದ ಒಕ್ಕೂಟಕ್ಕೆ ಸೇರಿಸದೆ, ಪ್ರತ್ಯೇಕ ಮುಸ್ಲಿಂ ರಾಷ್ಟ್ರ ಮಾಡಬೇಕೆಂದು ನಿಜಾಂ ಮೀರ್-ಉಸ್ಮಾನ್ ಅಲಿಖಾನ್‌ನ ಮಹಾದಾಸೆಯಾಗಿತ್ತು. ಹೈದರಾಬಾದ್ ಕರ್ನಾಟಕ ಅನೇಕ ಭಾಗ ಗಳಲ್ಲಿ ನಿಜಾಂನ ವಿರುದ್ಧವಾಗಿ ಸತ್ಯಾಗ್ರಹ, ಹೋರಾಟಗಳು ಪ್ರಾರಂಭವಾದವು. ಈ ಭಾಗದ ಸ್ವಾತಂತ್ರ್ಯ

ಹೋರಾಟಗಾರರು ಜನತೆಯಲ್ಲಿ ರಾಷ್ಟ್ರೀಯ ಪ್ರಜ್ಞೆ ಮೂಡಿಸಲು ಶ್ರಮಿಸಿದರು. ಇಲ್ಲಿನ ಜನರಿಗೆ ಸ್ವಾತಂತ್ರ್ಯದ ಅರಿವನ್ನು ತಿಳಿಸಲು ಈ ಜಿಲ್ಲೆಯ ಮುಖಂಡರು ಹಾಗೂ ರೂವಾರಿಗಳು ಮಾಡಿದ ಪ್ರಯತ್ನ ಶ್ಲಾಘನೀಯ ಅದರಂತೆ ಅನೇಕ ದೇಶ ಪ್ರೇಮಿಗಳು ಮುಂದೆ ಬಂದು ವಿಮೋಚನೆ ಹೋರಾಟಗಾರರಿಗೆ ಸಹಾಯ, ಸಲಹೆಗಳನ್ನು ನೀಡತೊಡಗಿದರು. ಇದರ ಮೂಲಕ ಹೈದರಾಬಾದ್ ಕರ್ನಾಟಕ ಪ್ರಾಂತ್ಯದ ಪ್ರತಿಯೊಂದು ಹಳ್ಳಿಯಲ್ಲಿ ನಿಜಾಂ ಆಡಳಿತವನ್ನು ಧಿಕ್ಕರಿಸಲು ಪ್ರೇರೆಪಿಸಿದರು. ಆರ್ಥಿಕವಾಗಿ, ಶೈಕ್ಷಣಿಕವಾಗಿ ಹಿಂದುಳಿದ ಕೊಪ್ಪಳ ಜಿಲ್ಲೆಯ ಅನೇಕ ಭಾಗಗಳಲ್ಲಿ ಸಾಮಾನ್ಯಜನತೆ ನಿಜಾಂನ ದರ್ಪಿಷ್ಠಪ್ರಭುತ್ವದ ವಿರುದ್ಧ ಹೋರಾಟ ಮಾಡಿರುವುದನ್ನು ಕಾಣಬಹುದು. ಇದನ್ನು ತಿಳಿದ ನಿಜಾಂನು 'ಕಾಶಿಂರಜ್ವಿ'ಯ ಮುಖಂಡತ್ವದಲ್ಲಿ 'ರಜಾಕಾರ' ಎಂಬ ಮುಸ್ಲಿಂ ಸ್ವಯಂ ಸಂಘವನ್ನು ಕಟ್ಟಿಸಿದನು. ಇದರ ಸದುಪಯೋಗ ಪಡೆದ ರಜಾಕಾರರು ಹೈದರಾಬಾದ್ ಕರ್ನಾಟಕ ಪ್ರಾಂತ್ಯದಲ್ಲಿ ಕೊಲೆ, ಸುಲಿಗೆ, ಅತ್ಯಾಚಾರಗಳನ್ನು ರಾಜಾರೋಷವಾಗಿ ಮಾಡಲು ಪ್ರಾರಂಭಿಸಿದರು. ಇದನ್ನು ಸಹಿಸದೆ ಜನತೆ ನಿಜಾಂನ ವಿರುದ್ಧ ಹೋರಾಟ ನಡೆಸಲು ಅಹಿಂಸಾ ಮಾರ್ಗವನ್ನು ಹಿಡಿದರು. ಕೆಲವು ವಿಮೋಚನ ಹೋರಾಟಗಾರರು ಹೈದರಾಬಾದ್ ಕರ್ನಾಟಕದ ಗಡಿಭಾಗಗಳಲ್ಲಿ ಶಿಬಿರಗಳನ್ನು ಸ್ಥಾಪಿಸಿ, ಅದರ ಮೂಲಕ ಹೋರಾಡಲು ಮುಂದಾದರು. ಕೊಪ್ಪಳ ದಂತಹ ಭಾಗದಲ್ಲಿ ಸಕ್ರಿಯವಾಗಿ ಹೋರಾಟಗಾರರು ವಿಮೋಚನ ಹೋರಾಟದಲ್ಲಿ ಭಾಗವಹಿಸಿದ್ದಾರೆ. ರಜಾಕಾರರ ವಿರುದ್ಧ ಹೋರಾಟ ಮಾಡಿ, 'ಎಲೆ ಮರೆ ಕಾಯಿ'ಯಂತೆ ಇರುವ ಸಾಮಾನ್ಯನ ಚಿತ್ರಣವನ್ನು ಶಿಬಿರಗಳ ಮೂಲಕ ಕಂಡುಕೊಳ್ಳವದು ಈ ಅಧ್ಯಯನ ಪ್ರಮುಖ ಉದ್ದೇಶವಾಗಿದೆ.

ಹೈದರಾಬಾದ್ ಕರ್ನಾಟಕ ಪ್ರದೇಶದ ಸ್ಥಿತಿಗತಿಗಳ ಬಗ್ಗೆ ತಿಳಿಸುವ ಅನೇಕ ಚರಿತ್ರೆ, ಗ್ರಂಥಗಳು ದೊರೆ ಯುತ್ತವೆ. ಇದುವರೆಗೂ ಈ ವಿಷಯ ಕುರಿತಾಗಿ ಎಂ.ಧ್ರುವನಾರಾಯಣರವರ (ಸಂ) ''ಸ್ವಾತಂತ್ರ್ಯಂದೋಳನ ರಾಯಚೂರ ಜಿಲ್ಲೆ'' ಎಂಬ ಕೃತಿ, ಡಾ.ಸೂರ್ಯನಾಥ ಕಾಮತ್‌ರವರ (ಸಂ) 'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು', ಡಾ.ಎಸ್.ಚಂದ್ರಶೇಖರರವರ 'ಆಧುನಿಕ ಕರ್ನಾಟಕದ ಆಂದೋಲನಗಳು' ಡಾ.ಎಚ್.ಎಸ್. ಗೋಪಾಲರವರ 'ಕರ್ನಾಟಕದ ಏಕೀಕರಣ'ಆಂದೋಲನಗಳು, ಡಾ.ಸಿ.ಎಂ.ಚುರ್ಚಿಹಾಳಮಠ ರವರ 'ಮುಂಡರಗಿ ನಾಡ ಸ್ವಾತಂತ್ರ್ಯ ಸಂಗ್ರಾಮ ಮತ್ತು ಹೈದರಾಬಾದ್ ವಿಮೋಚನ ಹೋರಾಟ' ಎಂಬ ಕೃತಿ. ರಾಮಣ್ಣ ಹವಳೇಯವರ.'ಸ್ವಾತಂತ್ರ್ಯ ಹೋರಾಟದಲ್ಲಿ ಗಜೇಂದ್ರಗಡ ಶಿಬಿರ' ಗೋಪಾಲ್‌ರಾವ್ ಹೇಜಿಬ್‌ರ 'ಹೈದರಾಬಾದ್ ಮುಕ್ತಿಸಂಘರ್ಷ' ನಲವಡಿ ಶ್ರೀಕಂಠ ಶಾಸ್ತ್ರಿಯವರ 'ಹೈದರಾಬಾದ್ ರಜಾಕಾರರ ಲಾವಣಿ', ವಿ.ಎಚ್.ದೇಸಾಯಿಯವರ 'ವಂದೇಮಾತರಂದಿಂದ ಜನಗಣಮನದವರೆಗೆ', ಅಮರೇಶ ನುಗಡೋಣಿಯವರ 'ರಾಯಚೂರು ಜಿಲ್ಲೆಯಲ್ಲಿ ಹೈದರಾಬಾದು ವಿಮೋಚನ ಚಳುವಳಿ' ಎಸ್.ಆರ್.ರಾಮಸ್ವಾಮಿರವರ 'ಸ್ವಾತಂತ್ರ್ಯದ ಮೈಲಿಗಲ್ಲುಗಳು', ಎಚ್.ಎಸ್.ಪಾಟೀಲ್‌ರವರ (ಸಂ) 'ವಿಮೋಚನೆ' ಮುಂತಾದ ಅಧ್ಯಯನ ಗಳು ಈ ಬಗ್ಗೆ ಹೊಸ ಬೆಳಕನ್ನು ಚೆಲ್ಲುತ್ತವೆ. ಆದರೂ ಹೊಸದಾಗಿ ರಚಿತವಾಗಿರುವ ಕೊಪ್ಪಳ ಜಿಲ್ಲೆಯ

ಸಮಗ್ರ ವಿಮೋಚನ ಹೋರಾಟ ಚಿತ್ರಣವನ್ನು ನೀಡುವ ಹಾಗೂ ಇಲ್ಲಿನ ಶಿಬಿರಗಳ ಕುರಿತಾಗಿ ಪ್ರತ್ಯೇಕವಾದ ಸಂಶೋಧನೆ ಅಧ್ಯಯನಗಳು ಈ ವರೆಗೆ ನಡೆದಿರುವುದು ವಿರಳ. ಈ ಹಿನ್ನೆಲೆಯಲ್ಲಿ 'ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದಲ್ಲಿ ಕೊಪ್ಪಳ ಜಿಲ್ಲೆಯ ಶಿಬಿರಗಳು' ಎಂಬ ವಿಷಯ ಪ್ರಸ್ತುತ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ.

## ಉದ್ದೇಶ

ಕೊಪ್ಪಳ ಜಿಲ್ಲೆಯು ಚಾರಿತ್ರಿಕವಾದ ಹಿನ್ನೆಲೆ ಹಾಗೂ ನಿಜಾಂ ಸಂಸ್ಥಾನದ, ರಾಜಕೀಯ ಸ್ಥಿತಿಗತಿಗಳನ್ನು ಕುರಿತು ಅಧ್ಯಯನ ಮಾಡುವುದು ಮತ್ತು ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದಲ್ಲಿ ಕೊಪ್ಪಳ ಜಿಲ್ಲೆಯ ಶಿಬಿರಗಳ ಕುರಿತು ಸಮಗ್ರ ಅಧ್ಯಯನ ಕೈಗೂಳ್ಳುವುದು ಈ ಪ್ರಬಂಧದ ಮುಖ್ಯ ಉದ್ದೇಶವಾಗಿದೆ. ಶಿಬಿರಗಳ ಹುಟ್ಟು, ಬೆಳವಣಿಗೆ ಹಾಗೂಹೋರಾಟದ ಸಾಧನೆಗಳನ್ನು ಗುರುತಿಸುವದು ಅಧ್ಯಯನದ ಮುಖ್ಯ ಉದ್ದೇಶವಾಗಿದೆ. ಹಾಗೆಯೇ ಶಿಬಿರಗಳ ಮೂಲಕ ಹೋರಾಟಕ್ಕೆ ಅಣಿಯಾದ ಹೋರಾಟಗಾರರನ್ನು ಪರಿಚಯಿಸುತ್ತಾ, ಅವರ ತ್ಯಾಗ-ಬಲಿದಾನಗಳ ಬಗ್ಗೆ ಸ್ಮರಿಸುತ್ತಾ, ಹೋರಾಟದಲ್ಲಿ ಸಾಮಾನ್ಯ ಜನತೆಯ ಪಾತ್ರದ ಕುರಿತು ವಿವರಣೆ ನೀಡಲು ಪ್ರಯತ್ನಿಸಲಾಗಿದೆ.

ವಿಮೋಚನ ಹೋರಾಟದಲ್ಲಿ ಮಾಧ್ಯಮಗಳು, ಕೀರ್ತನೆಗಳು, ಲಾವಣಿಗಳು ಹೇಗೆ ಕಾರ್ಯನಿರ್ವಹಿಸಿದೆ ಎಂಬುದನ್ನು ಜನಸಾಮಾನ್ಯರ ಮೂಲಕ ತಿಳಿದುಕೊಳ್ಳುವುದರ ಜೊತೆಗೆ, ನಿಜಾಂ ಹಾಗೂ ರಜಾಕಾರರ ಹಾವಳಿಗೆ ಈಡಾದ ಅನೇಕ ಗ್ರಾಮಗಳನ್ನು ಸೂಕ್ಷ್ಮವಾಗಿ ಅಧ್ಯಯನಮಾಡುವ ಉದ್ದೇಶವಿದೆ. ಜೊತೆಗೆ ರಜಾಕಾರರ ವಿರುದ್ಧ ಹೋರಾಡಿದ ವಿಮೋಚನ ಹೋರಾಟಗಾರರನ್ನು, ಇಂದಿನ ತಲೆಮಾರಿನವರಿಗೆ ಪರಿಚಯಿಸುವ ಅಗತ್ಯವಿದೆ. ಈ ಹಿನ್ನೆಲೆಯಲ್ಲಿ ಅವರ ಧೈರ್ಯ, ಸಾಹಸ, ತ್ಯಾಗ, ಬಲಿದಾನಗಳು ಕಾಲಕ್ರಮೇಣ ಮರೆಯಾಗುತ್ತಿವೆ. ಹಿಂದಿನ ಸಂಪ್ರಾದಾಯ, ಈಗಿನ ನಾಗರಿಕತೆ ಮತ್ತು ಆಧುನಿಕತೆ ಮೊದಲಾದ ವಿಚಾರಗಳು ಇಂದಿನ ಸಮಾಜದೊಡನೆ ಮುಖಾಮುಖಿಯಾಗುವದನ್ನು ಗಮನಿಸಬೇಕಾಗಿದೆ. ಇಂಥಹ ಸಂಗತಿಗಳನ್ನು ಪ್ರಸ್ತುತ ಅಧ್ಯಯನದಲ್ಲಿ ಬೆಳಕಿಗೆ ತರಲು ಪ್ರಯತ್ನಿಸಲಾಗಿದೆ.

ಈ ಅಧ್ಯಯನಕ್ಕೆ ಪೂರಕ ಆಕರ ಸಾಮಾಗ್ರಿಗಳನ್ನಾಗಿ ಗ್ರಂಥ, ಲೇಖನ, ಅಪ್ರಕಟಿತ ಹಸ್ತಪ್ರತಿ ದಾಖಲೆಗಳು, ವಿವಿಧ ವಿದ್ವಾಂಸರ ಸಂದರ್ಶನ ವಿವರಗಳನ್ನು ಇಲ್ಲಿ ಬಳಸಿಕೊಳ್ಳಲಾಗಿದೆ. ವಿಮೋಚನ ಹೋರಾಟಗಾರರನ್ನು, ಶಿಬಿರಗಳು ಏರ್ಪಟ್ಟಿದ್ದ ಸ್ಥಳಗಳಿಗೆ ಭೇಟಿ ಮಾಡಿ ವಿಷಯವನ್ನು ಸಂಗ್ರಹಿಸಿಕೊಳ್ಳಲಾಗಿದೆ. ಈ ಮಾಹಿತಿಯನ್ನು ಅಧ್ಯಾಯನುಸಾರವಾಗಿ ವಿಂಗಡಿಸಿಕೊಂಡು ಹೋರಾಟದ ಸ್ವರೂಪ ರೀತಿ-ನೀತಿಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಅಧ್ಯಯನದ ಅನುಕೂಲಕ್ಕಾಗಿ ಐದು, ಅಧ್ಯಾಯವಾಗಿ ವಿಂಗಡಿಸಿಕೊಳ್ಳಲಾಗಿದೆ. ವಿಷಯದ ಪ್ರಸ್ತಾವನೆ

ಯನ್ನು ಮೊದಲಿಗೆ ತಿಳಿಸಲಾಗಿದೆ. ಮೊದಲ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿಯ ಬಗ್ಗೆ ತಿಳಿಸುತ್ತಾ, ಹಾಗೇಯೆ ಎರಡನೆಯ ಅಧ್ಯಾಯದಲ್ಲಿ ಕೊಪ್ಪಳ ಜಿಲ್ಲೆಯ ಚಾರಿತ್ರಿಕ, ಭೌಗೋಳಿಕ ಹಿನ್ನಲೆಗಳನ್ನು ತಿಳಿಸಲಾಗಿದೆ. ವಿಮೋಚನ ಹೋರಾಟ ಮತ್ತು ರಜಾಕಾರರ ಬಗ್ಗೆ ಇದೆ ಅಧ್ಯಾಯದಲ್ಲಿ ವಿಶ್ಲೇಷಿಸುವ ಪ್ರಯತ್ನ ವಿದೆ. ಮೂರನೆಯ ಅಧ್ಯಾಯದಲ್ಲಿ ಕೊಪ್ಪಳ ಜಿಲ್ಲೆಯ ವಿಮೋಚನ ಹೋರಾಟ ಗಡಿ ಶಿಬಿರಗಳ ಬಗ್ಗೆ ವಿವರಿಸಲಾಗಿದೆ. ಈವರೆಗೆ ಎಲೆಮರೆಕಾಯಿಯಂತೆ ಹೋರಾಡಿದ ಹೋರಾಟದ ರೂವಾರಿಗಳನ್ನು ನಾಲ್ಕನೇ ಅಧ್ಯಾಯದಲ್ಲಿ ಪರಿಚಯಿಸಲಾಗಿದೆ. ಐದನೆಯ ಅಧ್ಯಾಯದಲ್ಲಿ ಸಮಾರೋಪವನ್ನು ತಿಳಿಸುತ್ತಾ ಇಡೀ ಅಧ್ಯಯನದ ಫಲಿತಾಂಶಗಳನ್ನು ವಿಶ್ಲೇಷಿಸಲಾಗಿದೆ. ಅಧ್ಯಯನಕ್ಕೆ ತಕ್ಕಂತೆ ಅಡಿಟಿಪ್ಪಣಿಯನ್ನು ಆಯಾ ಅಧ್ಯಾಯದ ಕೊನೆಗೆ ನೀಡಲಾಗಿದೆ. ಅಧ್ಯಯನಕ್ಕೆ ಅನುಕೂಲವಾಗುವಂತೆ ಗ್ರಂಥಋಣ, ಜಿಲ್ಲೆಯ ಮೇರೆ ಗಳನ್ನು ಗುರುತಿಸುವ ನಕ್ಷೆಗಳನ್ನು ಛಾಯಾಚಿತ್ರ ಇತ್ಯಾದಿಗಳನ್ನು ಅನುಬಂಧದಲ್ಲಿ ನೀಡಲಾಗಿದೆ.

ಅಧ್ಯಯನದ ಪ್ರಸ್ತುತ ವ್ಯಾಪ್ತಿಯನ್ನು ಕಾಲಮಿತಿ ಹಾಗೂ ಪ್ರಾದೇಶಿಕ ದೃಷ್ಟಿಯಿಂದಲೂ ಸೀಮಿತಗೊಳಿ ಸಲಾಗಿದೆ. 'ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದಲ್ಲಿ ಕೊಪ್ಪಳ ಜಿಲ್ಲೆಯ ಶಿಬಿರಗಳು' ಎನ್ನುವ ವಿಷಯಕ್ಕೆ ಸಂಬಂಧಿಸಿದಂತೆ, ಕೊಪ್ಪಳ ಜಿಲ್ಲೆಯ ಗಡಿಗೆ ಹೊಂದಿಕೊಂಡತೆ, ನಾಲ್ಕು ಶಿಬಿರಗಳಾದ ಮುಂಡರಗಿ ಶಿಬಿರ, ಗಜೇಂದ್ರಗಡ ಶಿಬಿರ, ಹನುಮನಾಳ ಶಿಬಿರ, ಇಟಗಿ ಶಿಬಿರಗಳನ್ನು ಕುರಿತು ವಿಶ್ಲೇಷಿಸುವ ಸಣ್ಣ ಪ್ರಯತ್ನವಿದೆ.

ಕೊಪ್ಪಳ ಜಿಲ್ಲೆಯ ಕುರಿತು ಸಮಗ್ರ ಅಧ್ಯಯನ ಈವರೆಗೆ ನಡೆದಿರಲಿಲ್ಲ. ಹೀಗಾಗಿ ಇಲ್ಲಿ ಆ ಪ್ರಯತ್ನ ವನ್ನು ಮಾಡಲಾಗಿದೆ. ಹೋರಾಟದ ರೂವಾರಿಗಳ ಹೇಳಿಕೆಗಳನ್ನು, ಸಮೂಹ ಮಾಧ್ಯಮ, ಶಿಕ್ಷಣ ಸಂಸ್ಥೆಗಳ ಪಾತ್ರವನ್ನು ಪರಿಗಣಿಸ ಲಾಗಿದೆ. ಈ ಭಾಗದಲ್ಲಿ ನಡೆದ ಶಿಬಿರಗಳ ಹೋರಾಟ ಕುರಿತು ಸ್ಪಷ್ಟ ಚಿತ್ರಣ ಇರಲಿಲ್ಲ. ಅಲ್ಲಲ್ಲಿ ಲೇಖನಗಳು, ಪತ್ರಿಕಾ ವರದಿಗಳು, ಪ್ರಮುಖವಾಗಿರುವಂತಹ ಶಿಬಿರಗಳ, ಹೋರಾಟಗಾರರ ಹೆಸರುಗಳನ್ನೇ ಲೇಖನ ಹಾಗೂ ಗ್ರಂಥಗಳಲ್ಲಿ ಅಳವಡಿಸಿಕೊಳ್ಳಲಾಗಿತ್ತು. ಕೇವಲ ಒಂದು ಅಥವಾ ಎರಡು ಶಿಬಿರಗಳು ಪರಿಚಯ ಮಾತ್ರ ಇರುತ್ತಿತ್ತು. ಆ ನಿಟ್ಟಿನಲ್ಲಿ ಗಮನಿಸಿ ಒಟ್ಟಾರೆ ಕೊಪ್ಪಳ ಜಿಲ್ಲೆಗೆ ಸಂಬಂಧ ಪಟ್ಟಂತಹ ಈ ನಾಲ್ಕು ಶಿಬಿರಗಳ ಯಾವ ಸ್ಥಳದಲ್ಲಿ ನೆಲೆಯೂರಿದ್ದವು ಮತ್ತು ಅದರ ಶಿಬಿರದ ನಾಯಕರು ಯಾರು ಎಂಬುದನ್ನು ಕ್ಷೇತ್ರ ಕಾರ್ಯದ ಮೂಲಕ ಕಂಡುಕೊಳ್ಳಲಾಗಿದೆ. ಅಂದಿನ ಭೌಗೋಳಿಕ ಸ್ಥಿತಿಗನು ಗುಣವಾಗಿ ಹಾಗೂ ಗಡಿಪ್ರದೇಶಗಳ ವ್ಯಾಪ್ತಿಯಲ್ಲಿಯೇ ಅಧ್ಯಯನ ಕೈಗೊಂಡಿದೆ.

## ಅಧ್ಯಾಯ ೨

# ಕೊಪ್ಪಳ ಜಿಲ್ಲೆಯ ವಿಮೋಚನ ಹೋರಾಟ ಹಾಗೂ ರಜಾಕಾರರು

೨.೧. ಕೊಪ್ಪಳ ಜಿಲ್ಲೆಯ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

೨.೨ ಸ್ವಾತಂತ್ರ್ಯ ಹೋರಾಟ

೨.೩. ವಂದೇಮಾತರಂ ಚಳವಳಿ

೨.೪. ರಜಾಕಾರರ ದೌರ್ಜನ್ಯಗಳು

೨.೫. ಆರ್ಯ ಸಮಾಜ

೨.೬. ಒಕ್ಕೂಟ ಚಳವಳಿ

೨.೭. ಪೊಲೀಸ್ ಕಾರ್ಯಾಚರಣೆ

೨.೮. ವಿಮೋಚನ ಹೋರಾಟದಲ್ಲಿ ಮಾಧ್ಯಮಗಳು

೨.೯. ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳು

# ಅಧ್ಯಾಯ ೨

# ಕೊಪ್ಪಳ ಜಿಲ್ಲೆಯ ವಿಮೋಚನ ಹೋರಾಟ ಹಾಗೂ ರಜಾಕಾರರು

ಹೈದರಾಬಾದ್ ನಿಜಾಂ ಸಂಸ್ಥಾನದಲ್ಲಿ ಸ್ವಾತಂತ್ರ್ಯ ಹೋರಾಟವು ಅನೇಕ ಘಟ್ಟಗಳಲ್ಲಿ ಜರುಗಿತು. ಮೊದಲನೆಯದಾಗಿ, ರಾಷ್ಟ್ರಮಟ್ಟದಲ್ಲಾದುದು. ಅದು ಬ್ರಿಟಿಷರ ವಿರುದ್ಧವಾಗಿ. ಎರಡನೆಯದಾಗಿ ಸಂಸ್ಥಾನ ಮಟ್ಟದಲ್ಲಿ ಆಳುತಿದ್ದ ನಿಜಾಂರ ವಿರುದ್ಧವಾಗಿ ಇದಲ್ಲದೆ, ಇನ್ನೂ ಕೆಳಗಿನ ಮಟ್ಟದಲ್ಲಿ ಅಂದರೆ ಸಂಸ್ಥಾನ ದೊಳಗಿದ್ದ ಜಾಗೀರುದಾರರು, ದೇಸಾಯಿ ಮತ್ತು ಕುಲಕರ್ಣಿಗಳ ಅಂಕಿತ ಪ್ರದೇಶಗಳಿದ್ದ ವ್ಯವಸ್ಥಿತ ಸರಕಾರವೇ ಇಲ್ಲದಂಥ ಪರಿಸ್ಥಿತಿಯ ವಿರುದ್ಧವಾಗಿಯೂ ಹೋರಾಟ ನಡೆಸಬೇಕಾದ ಅಗತ್ಯ ಅನಿವಾರ್ಯವಾಗಿತ್ತು.

ಏತನ್ಮಧ್ಯೆ, ಹೈದರಾಬಾದ್ ಕರ್ನಾಟಕ ಜನಜೀವನ ಸಂಪೂರ್ಣ ಅಸ್ತವ್ಯಸ್ತವಾಗಿತ್ತು. ಮಧ್ಯರಾತ್ರಿಯ ಸಂದರ್ಭಗಳಲ್ಲಿ ಪಾಕಿಸ್ತಾನಿ ವಿಮಾನಗಳು ಗಡಿ ಪ್ರದೇಶಗಳಾದ ಬೀದರ, ವಾರಂಗಲ್ ಮುಂತಾದೆಡೆ ಇಳಿದು ಯುದ್ಧ ಸಾಮಗ್ರಿಗಳನ್ನು ನೀಡಿ ವಾಪಾಸಾಗುತ್ತಿದ್ದವು. ಅದರಂತೆ ರಜಾಕಾರರು ಕಮ್ಯುನಿಸ್ಟರ ನಡುವೆ ದುಷ್ಟಕೂಟ ಏರ್ಪಟ್ಟು ನಾಗರಿಕರ ಮೇಲಿನ ಹಿಂಸಾತಾಂಡವ ಅಪರಿಮಿತವಾಗಿತ್ತು. ನಿಜಾಂನು ತನ್ನ ಸಂಸ್ಥಾನದ ವ್ಯಾಪ್ತಿಯಲ್ಲಿ ಉರ್ದುವನ್ನು ಆಡಳಿತ ಭಾಷೆಯನ್ನಾಗಿ ಜಾರಿಗೆ ತಂದನು. ಶೈಕ್ಷಣಿಕ ರಂಗಗಳಲ್ಲಿ ಉರ್ದು ಭಾಷೆಯು ಕಡ್ಡಾಯವಾಗಿದ್ದಲ್ಲದೇ ಹೈದರಾಬಾದ್ ಕರ್ನಾಟಕ ಪ್ರಾಂತ್ಯದ ಮನೆ ಮಾತು ಸಹ ಉರ್ದುಮಯವಾಗುವಂತೆ ಆದೇಶಿಸಿದನು. ಶಾಲಾ ಕಾಲೇಜುಗಳಲ್ಲಿ ಅಸಫ್‌ಜಾಹಿ ವಂಶದ ಸ್ತುತಿಯಾದ :

"ತಾಬದೇ ಖಾಲಿಕೇ ಆಲಂ ಯಹ ರಿಯಾಸತ್ ರಖೇ
ತುಜಕೋ ಉಸ್ಮಾ-ಉಸದ್ ಇಜಲಾಲ್ ಸಲಾಮತ್ ರಖೇ
ಜೈಸೇ ತೂಫಕರೇ ಸಲಾತೀ ಹೈ ಉಫಜಲೇ ಯಜದಾ
ಯೂಂಹಿ ಮುಮತಾಜ್ ತೇರಾ ಪಾರೇ ಹುಕುಮತ ರಖೇ"[1]

ಎಂಬ ಪ್ರಾರ್ಥನ ಗೀತೆಯ ಅರ್ಥ 'ನಿಜಾಮ ಉಸ್ಮಾನ್ ಅಲಿಖಾನ್ ಬಹದ್ದೂರ್ ಮನೆತನ ಸೂರ್ಯ ಚಂದ್ರ ಇರುವವರೆಗೆ ಬೆಳಗಬೇಕು. ದೇವರು ನಿನಗೆ ಸಂಪತ್ತು ಹಾಗು ಸಂತೋಷ ಕೊಡಲಿ' ಎಂದು ಸೂಚಿಸುತ್ತದೆ. ಇದು ಅನೇಕರಿಗೆ ಸಹಿಸಿಕೊಳ್ಳಲಾಗಲಿಲ್ಲವಾದರೂ, ಒಪ್ಪಿಕೊಳ್ಳುವುದು ಅನಿವಾರ್ಯವಾಗಿತ್ತು.

ಈ ಭಾಗದ ಜನತೆಗೆ ಅನೇಕ ರೀತಿಯ ರಾಷ್ಟ್ರೀಯ, ಅಂತರಾಷ್ಟ್ರೀಯ ಪ್ರಚಲಿತ ಘಟನೆಗಳು ಸಮೂಹ ಮಾಧ್ಯಮಗಳ ಕೊರತೆಯಿಂದ ತಿಳಿಯದಾದವು. ಇದರಿಂದ ಬೇಸತ್ತು ಹೈದರಾಬಾದ್ ನಿಜಾಂನ ಸ್ವತಂತ್ರ ಧೋರಣೆಯ ಸರ್ವಾಧಿಕಾರದ ನೀತಿಯನ್ನು ಖಂಡಿಸಲು ಈ ಭಾಗದಲ್ಲಿ ನಾಯಕರು, ಹೋರಾಟಗಾರರು ಹುಟ್ಟಿಕೊಂಡರು.

ಹೈದರಾಬಾದ್ ಕರ್ನಾಟಕದಲ್ಲಿ ಸ್ವಾತಂತ್ರ್ಯ ಹೋರಾಟದ ಕಿಡಿ ಹತ್ತಿದ್ದು ಮೊದಲು ರಾಯಚೂರು, ಕೊಪ್ಪಳ ಭಾಗಗಳಲ್ಲಿ ಎಂದೇ ಹೇಳಬೇಕು. ಕೊಪ್ಪಳದ ಕೋಟೆಯಲ್ಲಿ ಬ್ರಿಟಿಷರ ವಿರುದ್ಧ ಹೋರಾಡುತ್ತಾ ಮಡಿದ ಈ ಭಾಗದ ಅಪ್ಪಟ ಸ್ವಾತಂತ್ರ್ಯ ವೀರ ಹೋರಾಟಗಾರರಾದ ಮುಂಡರಗಿ ಭೀಮರಾಯ, ಹಮ್ಮಿಗಿ ಕೆಂಚನಗೌಡ ಹಾಗೂ ಬಂಡಾಯದ ಕಹಳೆಯೂದಿದ ವೀರಪ್ಪನ ಹೋರಾಟದ ಸ್ಫೂರ್ತಿಯು ನಿಜಾಂನ ವಿರುದ್ಧವಾಗಿ ಈ ಭಾಗದ ಜನತೆಯ ಮೇಲೆ ಪ್ರಭಾವ ಬೀರಿತು.[೨] ಅದರಂತೆ ಈ ರಜಾಕಾರರ ವಿರುದ್ಧ ವಿಮೋಚನ ಹೋರಾಟವು, ಕೀರ್ತಿನ ಕೇಸರಿ ಜಯರಾಮಚಾರ್ಯರಿಂದಲೇ ಪ್ರಾರಂಭವಾಯಿತು. ಇದರಿಂದ ಅನೇಕ ರೀತಿಯ ದುಷ್ಕೃತ್ಯ, ಮತಾಂತರವನ್ನು ತಡೆಯಲು, ಹೋರಾಟ ನಡೆಯಲು ಸಂಘ-ಸಂಸ್ಥೆಗಳು, ಒಕ್ಕೂಟಗಳು, ಗಡಿ ಭಾಗದಲ್ಲಿ ಶಿಬಿರಗಳು ಹೈದರಾಬಾದ್ ಕರ್ನಾಟಕ ಪ್ರಾಂತ್ಯದಲ್ಲಿ ಹುಟ್ಟಿಕೊಂಡವು. ಇವುಗಳು ನಿಜಾಂ ಹಾಗೂ ಬ್ರಿಟಿಷರ ವಿರುದ್ಧ ಹೋರಾಡುವ ಯುವಕರಿಗೆ ಸ್ಫೂರ್ತಿದಾಯಕವಾದವು.

## ೨.೧ ಕೊಪ್ಪಳ ಜಿಲ್ಲೆಯ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

ಕೊಪ್ಪಳವು ಪುರಾಣ ಮತ್ತು ಇತಿಹಾಸ ಪ್ರಸಿದ್ಧ ಸ್ಥಳವಾಗಿದೆ. ಈ ಪ್ರದೇಶದ ಚರಿತ್ರೆಯನ್ನು ಪ್ರಾಚೀನ ಕಾಲದಿಂದಲೂ ಗುರುತಿಸಬಹುದು. ಮೌರ್ಯವಂಶದ ಚಕ್ರವರ್ತಿ ಅಶೋಕನಿಗೆ (ಕ್ರಿ.ಪೂ.೨೭೩-೨೩೭) ಸಂಬಂಧಿಸಿದ ಎರಡು ಅಮೂಲ್ಯ ಶಾಸನಗಳು ಕೊಪ್ಪಳದಲ್ಲಿ ದೊರಕಿದೆ. ಈ ಶಾಸನಗಳು ಐತಿಹಾಸಿಕವಾಗಿ ತುಂಬಾ ಮಹತ್ವ ಪಡೆದಿದ್ದು, ಆ ಕಾಲದಲ್ಲಿ ಕೊಪ್ಪಳವು ಪ್ರಸಿದ್ಧಿ ಪಡೆದ ಬಗ್ಗೆ ತಿಳಿದು ಬರುತ್ತದೆ. ಮೌರ್ಯರ ಆಳ್ವಿಕೆಯ ನಂತರ ವಿಜಯನಗರ ಸಾಮ್ರಾಜ್ಯದವರೆಗೆ ವಿವಿಧ ರಾಜವಂಶಗಳು ಆಳ್ವಿಕೆ ನಡೆಸಿದ್ದು ಕಂಡು ಬರುತ್ತದೆ. ಈ ಪ್ರದೇಶವು ಒಂದಲ್ಲ ಒಂದು ಬಗೆಯ ಚಾರಿತ್ರಿಕ ಸಂಬಂಧ-ಸಂಪರ್ಕವನ್ನು ಪಡೆದಿದ್ದುಂಟು. ವಿವಿಧ ಬಗೆಯ ಆಕರಗಳಾದ ಶಾಸನ, ನಾಣ್ಯ, ಹಸ್ತಪ್ರತಿ, ಸಾಹಿತ್ಯ ಕೃತಿಗಳಲ್ಲಿ ಕೊಪ್ಪಳದ ಉಲ್ಲೇಖವಿರುವದು ಗಮನಾರ್ಹ.

ಕೊಪಣ ತೀರ್ಥ, ಆಧಿತೀರ್ಥ, ಮಹಾತೀರ್ಥ, ಕೊಪಣಾಚಲ ಮುಂತಾದ ಹೆಸರುಗಳಿಂದ ಕೊಪ್ಪಳವನ್ನು ಕರೆದಿರುವದು ಆಕರಗಳಿಂದ ವೇದ್ಯವಾಗುತ್ತದೆ. ಒಂದು ಕಾಲಕ್ಕೆ ಕೊಪ್ಪಳವು ಜೈನರ ಪ್ರಸಿದ್ಧ ಕ್ಷೇತ್ರವಾಗಿದ್ದಂತೆ ಕಂಡು ಬರುತ್ತದೆ. ಕನ್ನಡ ಸಾಹಿತ್ಯಲೋಕದ ರತ್ನಾತ್ರಯರಲ್ಲಿ ಒಬ್ಬರಾದ ಕವಿ ರನ್ನ ತನ್ನ 'ಸಾಹಸ ಭೀಮ

ವಿಜಯ' ಎಂಬ ಕೃತಿಯಲ್ಲಿ ತನಗೆ ಆಶ್ರಯದಾತೆಯಾಗಿದ್ದ ಅತ್ತಿಮಬ್ಬೆಯನ್ನು ಕುರಿತು 'ನೆಗಳ್ದ ಕೋಪಣಾಚಲ ದಂತೆ ಪವಿತ್ರ' ಎಂದು ಬಣ್ಣಿಸಿದ್ದಾನೆ. ಕುಮಾರಸೇನನೆಂಬ ಮುನಿಸೇನನು ಮುಳಗುಂದದಲ್ಲಿ ತಪಸ್ಸನ್ನು ಆಚರಿಸಲು ತೃಪ್ತಿ ಕಾಣದೇ ಕೊಪಣಾಚಲಕ್ಕೆ ಬಂದು ಮುಕ್ತಿಪಡೆದನೆಂದು 'ಚಾವುಂಡರಾಯ ಪುರಾಣ' ಹೇಳಿದೆ. ಇಲ್ಲಿ ೭೭೨ ಜಿನಾಲಯಗಳಿದ್ದವೆಂದು ಒಂದು ಶಾಸನದಲ್ಲಿ ಉಲ್ಲೇಖವಿದೆ. ಅದರಂತೆ ಕನ್ನಡದಲ್ಲಿ ಪ್ರಥಮ ಶಾಸ್ತ್ರ ಗ್ರಂಥವೆಂದು ಕೀರ್ತಿಗೆ ಪಾತ್ರವಾಗಿರುವ ಕವಿರಾಜಮಾರ್ಗದಲ್ಲಿ ಇದನ್ನು 'ಮಹಾಕೊಪಣನಗರ' ಎಂದು ಕರೆಯಲಾಗಿದೆ. ರಾಷ್ಟ್ರಕೂಟ, ಹೊಯ್ಸಳ, ಕಲ್ಯಾಣ ಚಾಲುಕ್ಯ ಮತ್ತು ಕುಮ್ಮಟ ದುರ್ಗದ ನಾಯಕರು ಇಲ್ಲಿ ಆಳ್ವಿಕೆ ನಡೆಸಿರುವದು ಸ್ಪಷ್ಟವಾಗಿದೆ. ವಿಜಯನಗರ ಸಾಮ್ರಾಜ್ಯ ಪತನವಾದ ಮೇಲೆ ಈ ಪ್ರದೇಶ ಬಿಜಾಪುರದ ಆದಿಲ್‌ಶಾಹಿ (ಕ್ರಿ.ಶ.೧೫೫೭-೧೫೮೦) ಆಳ್ವಿಕೆಗೆ ಒಳಪಡುತ್ತದೆ. ತದನಂತರ ಕೊಪ್ಪಳ ಪ್ರದೇಶವು ಶಿವಾಜಿ, ಹೈದರ್‌ಅಲಿ, ಟಿಪ್ಪು ಅವರುಗಳು ಆಳ್ವಿಕೆಯ ಭಾಗವಾಗಿಯೂ ಇದ್ದುದ್ದನ್ನು ಗುರುತಿಸಬಹುದಾಗಿದೆ. ೧೮ ನೇ ಶತಮಾನದ ಕೊನೆಯ ಭಾಗದಲ್ಲಿ ಬ್ರಿಟಿಷರ ಆಳ್ವಿಕೆಗೆ ಈ ಪ್ರದೇಶವು ಒಳಪಡುತ್ತದೆ. ನಂತರ ೧೯ ನೇ ಶತಮಾನದ ಮಧ್ಯಭಾಗದಲ್ಲಿ ಬ್ರಿಟಿಷರ ವಿರುದ್ಧ ಸ್ಥಳೀಯರ ಪ್ರತಿರೋಧ ಕಂಡುಬರುತ್ತದೆ. ಆ ಪೈಕಿ ವೀರಪ್ಪನೆಂಬ ಜಮಿನ್ದಾರ ಮತ್ತು ಮುಂಡರಗಿ ಭೀಮರಾಯ ಎಂಬುವರು ಬ್ರಿಟಿಷರ ವಿರುದ್ಧ ಬಂಡೆದ್ದು ಹೋರಾಟ ಮಾಡಿ ಕೊಪ್ಪಳದ ಕೋಟೆಯಲ್ಲಿ ಹುತಾತ್ಮರಾಗಿದ್ದಾರೆ. ಹೈದರಾಬಾದಿನ ನಿಜಾಂರು ಈ ಭಾಗವನ್ನು 'ನವಾಬ ಸಾಲಾರಜಂಗ್ ಅವ್ವಲ್' ಅವರಿಗೆ ಜಹಗೀರಾಗಿ ನೀಡಿದನು. ಕ್ರಿ.ಶ. ೧೮೬೧ ರಿಂದ ೧೯೪೮ ರ ಈ ಪ್ರದೇಶ ಹೈದರಾಬಾದ್ ನಿಜಾಂನ ಜಹಗೀರು ಜಿಲ್ಲೆಯಾಗಿತ್ತು. ಭಾರತದ ಒಕ್ಕೂಟಕ್ಕೆ ಸೇರುವರೆಗೂ ಸಣ್ಣ ಜಹಗೀರು ಜಿಲ್ಲೆಯಾಗಿತ್ತು. ರಾಜ್ಯ ಪುನರ್‌ವಿಂಗಡಣಾ ಸಮಯದಲ್ಲಿ ಜಹಗೀರು ರದ್ದತಿ ಶಾಸನದಿಂದಾಗಿ ಅದು ಜಿಲ್ಲೆಯ ಸ್ಥಾನಮಾನ ಕಳೆದುಕೊಂಡಿತ್ತು. ನಂತರ ರಾಯಚೂರು ಜಿಲ್ಲೆಗೆ ಸೇರಿಸಲಾಯಿತು. ಮತ್ತೆ ಜಿಲ್ಲಾ ಪುನರ್‌ವಿಂಗಡಣಾ ಸಮಯದಲ್ಲಿ ೧೯೯೭ ಆಗಸ್ಟ್ ೧೫ ರಂದು ರಾಯಚೂರು ಜಿಲ್ಲೆಯನ್ನು ವಿಭಜಿಸಿ ಹೊಸದಾಗಿ ಕೊಪ್ಪಳವನ್ನು ಜಿಲ್ಲೆಯನ್ನಾಗಿ ರಚಿಸಲಾಯಿತು.

ಇಂದು ಯಲಬುರ್ಗಾ, ಕುಷ್ಟಗಿ, ಗಂಗಾವತಿ, ಕೊಪ್ಪಳ ನಾಲ್ಕು ತಾಲೂಕುಗಳನ್ನು ಹೊಂದಿಕೊಂಡಂತೆ ಕೊಪ್ಪಳ ಜಿಲ್ಲೆಯ ಭೌಗೋಳಿಕ ಚದರಳತೆ ೫೫೫೯ ಚ.ಕೀ.ಮಿ. ಇದ್ದು, ೯.೫೮ ಲಕ್ಷ ಜನಸಂಖ್ಯೆಯನ್ನು ಹೊಂದಿದೆ. ಕೊಪ್ಪಳ ಜಿಲ್ಲೆಯು ಕರ್ನಾಟಕದ ಈಶಾನ್ಯ ಭಾಗದಲ್ಲಿದೆ. ಉತ್ತರದಲ್ಲಿ ಬಾಗಲಕೋಟೆ, ಮತ್ತು ರಾಯಚೂರು ಪೂರ್ವದಲ್ಲಿ ರಾಯಚೂರು, ದಕ್ಷಿಣದಲ್ಲಿ ಬಳ್ಳಾರಿ ಪಶ್ಚಿಮದಲ್ಲಿ ಗದಗ ಜಿಲ್ಲೆಗಳು ಮೇರೆ ಗಳಾಗಿವೆ. ಈ ಜಿಲ್ಲೆಯು ತ್ರಿಕೋನಾ ಕೃತಿಯಲ್ಲಿದೆ. ಉತ್ತರದ ತುದಿ ವಿಸ್ತೃತವಾಗಿದೆ. ದಕ್ಷಿಣದ ತುದಿ ಚೂಪಾಗಿದ್ದು, ಭೌಗೋಳಿಕ ವಿಸ್ತೀರ್ಣದಲ್ಲಿ ಕೊಪ್ಪಳವು ರಾಜ್ಯದಲ್ಲಿ ೧೮ ನೆಯ ಸ್ಥಾನದಲ್ಲಿದೆ.

## ೨.೨. ಸ್ವಾತಂತ್ರ್ಯ ಹೋರಾಟ

ಭಾರತದಲ್ಲಿ ಗಾಂಧೀಜಿಯವರ ನೇತೃತ್ವದ ಮೂಲಕ ಬ್ರಿಟಿಷರ ಆಳ್ವಿಕೆಯ ವಿರುದ್ಧ ಹೋರಾಟದ ವಿವಿಧ ಚಳವಳಿಗಳು ಆರಂಭವಾಗಿದ್ದವು. ಭಾರತದ ಸ್ವಾತಂತ್ರ್ಯದ ಕಾವು ಏರಿದಂತೆಲ್ಲಾ ಹೈದರಾಬಾದ್ ಕರ್ನಾಟಕ ಪ್ರಾಂತ್ಯದ ಜನರಲ್ಲಿ ರಾಷ್ಟ್ರೀಯತೆ ಭಾವನೆಯು ಅಂಕುರಿಸಿತು. ಅದರಂತೆ, ದೇಶದಲ್ಲಿ ಗಾಂಧೀಜಿಯವರ ಅನುಯಾಯಿಗಳ ಸಂಖ್ಯೆ ದಿನೇ ದಿನೇ ಹೆಚ್ಚಾಗತೊಡಗಿತು. ದೇಶದಲ್ಲೆಲ್ಲಾ ಸಂಚಾರ ಮಾಡಿ ಜನತೆಯನ್ನು ಹುರಿದುಂಬಿಸುತ್ತಿರುವುದು ಕಾಣುತ್ತಿತ್ತು. ಕೆಲವು ಸ್ವಾತಂತ್ರ್ಯ ಹೋರಾಟಗಾರರು ಬ್ರಿಟಿಷರ ಕಣ್ಣು ತಪ್ಪಿಸಿ ಮಾರು ವೇಷದಲ್ಲಿ ಭೂಗತ ಚಟುವಟಿಕೆಗಳಲ್ಲಿ ತೊಡಗಿದ್ದರು. ಹಾಗೆಯೇ ಸ್ವಾತಂತ್ರ್ಯಕ್ಕಾಗಿ ಗಾಂಧೀಜಿ ರೂಪಿಸಿದ ಅಸಹಕಾರ ಚಳವಳಿ, ಸ್ವದೇಶಿ ಚಳವಳಿ, ಕರ ನಿರಾಕರಣೆ, ದಂಡಿಯಾತ್ರೆ, ಭಾರತ ಬಿಟ್ಟು ತೊಲಗಿ ಚಳುವಳಿಗಳು ದೇಶಾದ್ಯಂತ ನಡೆದವು. ಹೀಗೆಯೇ ಕೊಪ್ಪಳ ಪ್ರದೇಶದಲ್ಲಿಯು ಇಂಥಾ ಘಟನೆಗಳು ಸಂಭವಿಸಿದವು.[೩] ಈ ಹೋರಾಟಕ್ಕೆ ಕಂಡುಕೊಂಡ ಸೂಕ್ತ ಮಾರ್ಗವೇ ಅಹಿಂಸಾಮಾರ್ಗ. ಅವರು ಸತ್ಯಾಗ್ರಹ ವನ್ನು ಬಳಸಿಕೊಂಡು ಬ್ರಿಟಿಷರ ವಿರುದ್ಧ ದಂಗೆಗಳನ್ನು ರೂಪಿಸಲು ಸಿದ್ಧತೆ ನಡೆಸುತ್ತಿದ್ದರು. ದೇಶದ ಸ್ವಾತಂತ್ರ್ಯ ಚಳವಳಿಯಲ್ಲಿ ತೀವ್ರಗಾಮಿ ನಾಯಕರು ಮಂದಗಾಮಿ ನಾಯಕರುಗಳ ಧೈರ್ಯ, ಸಾಹಸ ಹಾಗೂ ಬುದ್ಧಿವಂತಿಕೆಯು ಹೈದರಾಬಾದ್ ಪ್ರಾಂತ್ಯದ ಜನರ ಮೇಲೆ ತೀವ್ರವಾದ ಪರಿಣಾಮವನ್ನು ಬೀರಿತು. ಇದನ್ನರಿತ ಬ್ರಿಟಿಷರು ಆಡಳಿತದಲ್ಲಿ ಕೆಲವು ಸುಧಾರಣೆಗಳನ್ನು ಕೈಗೊಳ್ಳುವಲ್ಲಿ ಮುಂದಾದರು. ಭಾರತೀಯರನ್ನು ಆಡಳಿತದಲ್ಲಿ ಸೇರಿಸಿಕೊಂಡ ನಂತರ ಈ ಸುಧಾರಣೆಯ ಫಲವನ್ನು ಇಡೀ ಭಾರತದ ಜನತೆ ಅನುಭವಿಸಿತು. ಆದರೆ ಈ ಸವಿಯ ಅನುಭವದಿಂದ ಹೈದರಾಬಾದ್ ಕರ್ನಾಟಕದ ಪ್ರಜೆಗಳು ಮಾತ್ರ ವಂಚಿತರಾದರು. ಇಲ್ಲಿ ಒಂದೆಡೇ ಸ್ವಾತಂತ್ರ್ಯ ಹೋರಾಟದ ಕೆಚ್ಚನ್ನು ನೋಡುವುದು, ಇನ್ನೊಂದೆಡೆ ನಿಜಾಂನ ದರ್ಪಿಷ್ಠ ಆಡಳಿತದ ವಿರುದ್ಧ ಹೋರಾಡುವುದು ಈ ಭಾಗದ ಜನತೆಯ ಸಾಮಾನ್ಯ ಸಂಗತಿಯಾಗಿತ್ತು. ಇದರೊಂದಿಗೆ ಸ್ವಾತಂತ್ರ್ಯ ಪ್ರಜ್ಞೆಯು ಹೆಚ್ಚು ಬೆಳೆಯಲು ಆಸ್ಪದವಾಯಿತು.

ಭಾರತ ಸ್ವಾತಂತ್ರ್ಯ ಹೋರಾಟದಂತೆ ಹೈದರಾಬಾದ್ ಕರ್ನಾಟಕದ ಪ್ರಾಂತ್ಯಗಳಲ್ಲಿಯೂ ಸ್ವಾತಂತ್ರ್ಯಕ್ಕಾಗಿ ಹೋರಾಟ, ಪ್ರತಿಭಟನೆಗಳು ಜರುಗಿದವು. ಹೈದರಾಬಾದ್ ಸಂಸ್ಥಾನಕ್ಕೆ ಒಳಪಟ್ಟ ಜನತೆಯೂ ಕೂಡ, ಜವಾಬ್ದಾರಿ ಸರ್ಕಾರದ ಪ್ರಾತಿನಿಧ್ಯದ ಬಗ್ಗೆ ನಿಜಾಂ ಆಡಳಿತಕ್ಕೆ ಮನವಿ ಮಾಡಿಕೊಂಡವು. ಹೈದರಾಬಾದ್ ಸಂಸ್ಥಾನದಲ್ಲಿ ಇಲ್ಲಿಯ ಜನರನ್ನು ಪ್ರತಿನಿಧಿಗಳಾಗಿ ನೇಮಿಸಬೇಕು ಎಂದು ಕೇಳತೊಡಗಿದವು. ಕೊಪ್ಪಳ ಜಿಲ್ಲೆಯ ಯಲಬುರ್ಗಾ, ಕುಕನೂರು, ಕುಷ್ಟಗಿ, ಗಜೇಂದ್ರಗಡಗಳಲ್ಲಿ ಗಾಂಧೀಜಿಯ ಪ್ರಭಾವದಿಂದ ಸ್ವಾತಂತ್ರ್ಯ ಹೋರಾಟದ ಬಿಸಿ ಏರತೊಡಗಿತು. ಈ ಭಾಗದ ನಾಯಕರಾದ ವೀರಭದ್ರಪ್ಪ ಶಿರೂರು, ಅಳವಂಡಿ ಶಿವಮೂರ್ತಿ ಸ್ವಾಮಿಗಳು, ಮುರುಡಿ ಭೀಮಜ್ಜ ಮುಂತಾದವರು ಇಲ್ಲಿನ ಜನತೆಯನ್ನು ಎರಡು ರೀತಿಯ ಹೋರಾಟಕ್ಕೆ

ಸಿದ್ಧಗೊಳಿಸಬೇಕಾಗಿತ್ತು. ಮೊದಲನೆಯದಾಗಿ, ಬ್ರಿಟಿಷರ ವಿರುದ್ಧ ಎರಡನೆಯದಾಗಿ, ನಿಜಾಂನ ವಿರುದ್ಧ, ಹೈದರಾಬಾದ್ ಕರ್ನಾಟಕದ 'ಪಿತಾಮಹ'ನೆಂದೇ ಹೆಸರಾದ ಸ್ವಾಮಿರಮಾನಂದತೀರ್ಥರು ಈ ಭಾಗದಲ್ಲಿ ಸಂಚರಿಸಿ ಹೋರಾಟಕ್ಕೆ ಜನರನ್ನು ಹುರಿದುಂಬಿಸಿದರು. ರಾಷ್ಟ್ರೀಯತೆಯ ಮಂತ್ರವನ್ನು ಸಾಮಾನ್ಯ ಜನತೆಗೂ ತಿಳಿಸಲು ಕಾರ್ಯಕೈಗೊಂಡರು.

'ಹೈದರಾಬಾದ್ ರಾಜಕೀಯ ಪರಿಷತ್' ೧೯೨೩ರಲ್ಲಿ ಸ್ಥಾಪನೆಗೊಂಡಿತು. ಮುಂಬೈ, ಕಾಕಿನಾಡ, ಪುಣೆ ಮೊದಲಾದ ಸ್ಥಳಗಳಲ್ಲಿ ನಿಜಾಂನ ಆಡಳಿತದ ವಿರುದ್ಧ ಸಭೆ, ಹರತಾಳಗಳು ಆರಂಭವಾದವು. ಇಂತಹ ಸಭೆಗಳಿಗೆ ದೇಶದ ಮಹಾನ್ ನಾಯಕರು ಆಗಮಿಸಿ ಇಲ್ಲಿನ ಜನತೆಯನ್ನು ನಿಜಾಂನ ವಿರುದ್ಧ ಹೋರಾಡಲು ಪ್ರೇರೇಪಿಸಿದರು. ಇಂತಹ ಕಾರ್ಯಕ್ರಮಗಳ ಮೂಲಕ ಜನರಲ್ಲಿ ರಾಷ್ಟ್ರ ಪ್ರಜ್ಞೆ ಮೂಡಿಸತೊಡಗಿದರು. ಭಾರತ ದೇಶ ಹೇಗೆ ಸ್ವತಂತ್ರಗೊಂಡಿತೋ ಹಾಗೆಯೇ ಹೈದರಾಬಾದ್ ಕರ್ನಾಟಕ ಭಾಗವು ಕೂಡ ಸ್ವಾತಂತ್ರ್ಯ ಪಡೆಯಬೇಕೆಂದು ಹೋರಾಟಕ್ಕಿಳಿಯಬೇಕಾಯಿತು. ಹೀಗೆ ಹೈದರಾಬಾದ್ ಸಂಸ್ಥಾನಕ್ಕೆ ಒಳಪಟ್ಟ ಕನ್ನಡದ ಪ್ರದೇಶಗಳಾದ ಬೀದರ್, ಗುಲ್ಬರ್ಗಾ, ರಾಯಚೂರು ಹಾಗೂ ಕೊಪ್ಪಳಗಳಲ್ಲಿ ಎರಡು ಘಟ್ಟಗಳಲ್ಲಿ ಸ್ವಾತಂತ್ರ್ಯ ಹೋರಾಟವನ್ನು ಗುರುತಿಸಬಹುದು.

## ೨.೩. ವಂದೇ ಮಾತರಂ ಚಳವಳಿ

ಭಾರತ ಹಲವು ಧರ್ಮ, ಭಾಷೆ, ಸಂಸ್ಕೃತಿಗಳ ಸಂಗಮ ಕ್ಷೇತ್ರ. ಇಲ್ಲಿ ವಿವಿಧತೆಯಲ್ಲಿ ಏಕತೆಯನ್ನು ಕಾಣುವ ಲಕ್ಷಣಗಳಿವೆ. ಆಚಾರ, ವಿಚಾರಗಳು ಬೇರೆ ಬೇರೆ ಇದ್ದರೂ ಕೊನೆಯಲ್ಲಿ ಏಕತೆಯನ್ನು ಸಾರುವುದೇ ಭಾರತೀಯರ ಮನೋಧರ್ಮವಾಗಿದೆ. ಸ್ವಾತಂತ್ರ್ಯ ಹೋರಾಟದ ಸಮಯದಲ್ಲಿ 'ವಂದೇ ಮಾತರಂ' ಚಳವಳಿಯು ದೇಶಾದ್ಯಂತ ಹಬ್ಬಿತು. ಅದರಂತೆ ಹೈದರಾಬಾದ್ ಕರ್ನಾಟಕ ಭಾಗದಲ್ಲಿ ನಿಜಾಂನ ವಿರುದ್ಧವಾಗಿ ಇಲ್ಲಿನ ಜನತೆ ವಂದೇ ಮಾತರಂ ಚಳವಳಿಯಲ್ಲಿ ಭಾಗವಹಿಸಿ ಸೆರೆವಾಸ ಅನುಭವಿಸಿದರು. ಹೀಗೆ ರಾಷ್ಟ್ರೀಯ ಚಳವಳಿಗಳು ಸತ್ಯಾಗ್ರಹಗಳು, ಇಲ್ಲಿಯ ಜನರಿಗೆ ಪ್ರೇರಣೆ ನೀಡುತ್ತಲೇ ನಿಜಾಂನಿಂದ ಮುಕ್ತರಾಗಲು ಪ್ರೇರೆಪಿಸಿದವು. ಹೈದರಾಬಾದಿನ ಉಸ್ಮಾನಿಯಾ ವಿಶ್ವವಿದ್ಯಾಲಯದ ವಿದ್ಯಾರ್ಥಿಗಳಿಗೆ 'ವಂದೇ ಮಾತರಂ' ಹಾಡಲು ನಿರ್ಬಂದಿಸಲಾಯಿತು. ಇದರಿಂದ ಉದ್ರಿಕ್ತರಾದ ಹೋರಾಟಗಾರರು, ಕ್ರಾಂತಿಕಾರಿಗಳು ಹಾಗೂ ದೇಶಭಕ್ತರು 'ವಂದೇ ಮಾತರಂ' ರಾಷ್ಟ್ರಗೀತೆಯಿಂದ ಸ್ಫೂರ್ತಿಪಡೆದು ವಿಮೋಚನ ಹೋರಾಟದಲ್ಲಿ ಭಾಗವಹಿಸಿದರು. ಹೀಗೆ ಅನೇಕರು 'ವಂದೇಮಾತರಂ' ಕೂಗುತ್ತಾ ತಮ್ಮ ಪ್ರಾಣವನ್ನು ಬಿಟ್ಟಿದ್ದಾರೆ.[೪]

ಮೊದಲು ರಾಯಚೂರಿನಲ್ಲಿ 'ಶಂಕರಲಿಂಗ ಭಜನಾ ಮಂಡಳಿ'ಯ ಮೇಲೆ ರಜಾಕಾರರು ದಾಳಿ ಮಾಡಿದರು. ಹಾಗೆಯೇ ಕೊಪ್ಪಳದಲ್ಲಿಯೂ ಅನೇಕ ವಿದ್ಯಾರ್ಥಿಗಳ ಹಾಗೂ ಅವರ ಹೋರಾಟಕ್ಕೆ 'ವಂದೇ ಮಾತರಂ'

ಪ್ರಮುಖ ಅಸ್ತ್ರವಾಯಿತು. ಈ ಹೋರಾಟವು ರಾಜ್ಯಾದ್ಯಂತ ವ್ಯಾಪಿಸಿತು. ವಿದ್ಯಾರ್ಥಿಗಳು ಕಾಲೇಜು ತೊರೆದು ಸತ್ಯಾಗ್ರಹದಲ್ಲಿ ಧುಮುಕಿದರು. ಕೊಪ್ಪಳ ಜಿಲ್ಲೆಯಲ್ಲಿ ವಂದೇ ಮಾತರಂ ಚಳವಳಿಯು ತೀವ್ರಗೊಳ್ಳಲು ಇಲ್ಲಿನ ಸತ್ಯಾಗ್ರಹ ನಿರತರಾದ ವಿದ್ಯಾರ್ಥಿಗಳ ಸಾವು ಇಲ್ಲಿನ ನಾಯಕರನ್ನು ಮತ್ತಷ್ಟು ಪ್ರೇರೇಪಿಸಿತು. ಕುಷ್ಟಗಿಯ ಭೀಮರಾವ್ ದೇಸಾಯಿಯವರನ್ನು ಗುಲ್ಬರ್ಗಾ ಜೈಲಿನಲ್ಲಿ ಪೊಲೀಸರು ಲಾಠಿ ಚಾರ್ಜು ಮಾಡಿ ಕೊಂದು ಹಾಕಿದರು. ಹೀಗೆಯೇ 'ವಂದೇ ಮಾತರಂ' ಚಳವಳಿಯಿಂದ ಕೊಪ್ಪಳ ಜಿಲ್ಲೆಯ ಹನುಮಸಾಗರದ ದಾಸಪ್ಪ ಎಂಬ ವಿದ್ಯಾರ್ಥಿಯು ಪೊಲೀಸರ ಚಿತ್ರಹಿಂಸೆಯಿಂದ ಹುತಾತ್ಮನಾದನು. ಕಾತರಿಕೆಯಲ್ಲಿ ಎಸ್.ಎಂ.ಬಂಗಾರ ಶೆಟ್ಟರ್ ಕೂಡ ಸತ್ಯಾಗ್ರಹ ಮಾಡಿ ವಂದೇ ಮಾತರಂ ಚಳುವಳಿಗೆ ಧುಮುಕಿದರು. ಹೆಚ್ಚಾಗಿ ವಿದ್ಯಾರ್ಥಿಗಳು ಈ ವಂದೇ ಮಾತರಂ ಚಳವಳಿಯಲ್ಲಿ ಭಾಗವಹಿಸಿ ಸೆರೆಸಿಕ್ಕರು. ಹೀಗೆ ಕೊಪ್ಪಳ ಜಿಲ್ಲೆಯಲ್ಲಿ 'ವಂದೇ ಮಾತರಂ' ಚಳವಳಿಯು ತಡವಾಗಿಯಾದರು ಯಶಸ್ವಿಯಾಯಿತು. ಈ ಸಂದರ್ಭದಲ್ಲಿ ಕೀರ್ತನೆಗಳಿಂದ ಹೋರಾಟದ ಸ್ಫೂರ್ತಿಯನ್ನು ಹುಟ್ಟಿಸುತ್ತಿದ್ದ ಕೀರ್ತನ ಕೇಸರಿ ಜಯರಾಮಚಾರ್ಯರ ಹೆಸರು ಸ್ಮರಣೀಯ.

## ೨.೪. ರಜಾಕಾರರ ದೌರ್ಜನ್ಯಗಳು

ಹೈದರಾಬಾದ್ ಕರ್ನಾಟಕದ ಜನರು ತಮ್ಮ ಸ್ವಾತಂತ್ರ್ಯಕ್ಕಾಗಿ ಎರಡು ರೀತಿಯ ಹೋರಾಟಗಳನ್ನು ಮಾಡಿದ್ದಾರೆ. ಮೊದಲನೆಯದಾಗಿ, ಬ್ರಿಟಿಷರ ವಿರುದ್ಧ ಭಾರತ ಸ್ವಾತಂತ್ರ್ಯಕ್ಕಾಗಿ ಹಾಗೂ ಭಾರತದ ಒಕ್ಕೂಟದಲ್ಲಿ ಸೇರಲು ನಿಜಾಂನ ಹಾಗೂ ರಜಾಕಾರರ ಕಪಿಮುಷ್ಠಿಯಿಂದ ಬಿಡಿಸಿಕೊಳ್ಳಲು ಹೋರಾಟ ಮಾಡಬೇಕಾಯಿತು. ಸ್ವಾತಂತ್ರ್ಯ ಭಾರತದ ಧ್ವಜವನ್ನು ಹೈದರಾಬಾದ್ ನಿಜಾಂ ಪ್ರಾಂತ್ಯದಲ್ಲಿ ಹಾರಿಸುತ್ತೇವೆ ಎಂದು ಇಲ್ಲಿನ ವಿಮೋಚನ ಹೋರಾಟಗಾರರು ಪ್ರತಿಜ್ಞೆ ಮಾಡಿದರು. ವಿದ್ಯಾರ್ಥಿಗಳು ಹಾಗೂ ಯುವಕರು ಬೀದಿಗಿಳಿದು ಚಳವಳಿ ಮಾಡಲು ಸಿದ್ಧರಾದರು. ಹೈದರಾಬಾದ್ ಕರ್ನಾಟಕ ಭಾಗದಲ್ಲಿ ಅನೇಕ ವಿಮೋಚನ ಹೋರಾಟಗಾರರು ಪ್ರತಿಭಟನೆ, ಸತ್ಯಾಗ್ರಹದಲ್ಲಿ ತೊಡಗಿದರು. ನಿಜಾಂ ಸರಕಾರವು ಕೆಲವರನ್ನು ಸೆರೆ ಹಿಡಿದು ಜೈಲುಗಳಲ್ಲಿ ತುಂಬಿತು. ಪರಿಸ್ಥಿತಿಯ ವಿಕೋಪವನ್ನು ಅರಿತುಕೊಂಡು ಮೀರ್-ಉಸ್ಮಾನ್ ಅಲಿಖಾನ್ ತನ್ನಿಂದ ಜನ್ಮ ಪಡೆದ 'ಮಜಲೀಸ್-ಇತ್ತೆಹಾದುಲ್-ಮುಸಲ್ಮೀನ್' ಎಂಬ ಮತೀಯ ಸಂಘಟನೆಗಳನ್ನು ವಿಮೋಚನ ಹೋರಾಟಗಾರರ ಮೇಲೆ ಹೋರಾಡಲು ಬಿಟ್ಟನು. ನಿಜಾಂ ಸರಕಾರದ ನಿಲುವುಗಳನ್ನು ಬೆಂಬಲಿಸಲು ಇತ್ತೆಹಾದುಲ್ ಮುಸಲ್ಮೀನ್ ಎಂಬ ಸಂಘಟನೆಯು ಕಟಿಬದ್ಧವಾಯಿತು. ಈ ಸಂಘಟನೆಯ ಸದಸ್ಯರ ಸಂಖ್ಯೆಯು ಪ್ರಾರಂಭದಲ್ಲಿ ಕಡಿಮೆ ಪ್ರಮಾಣದಲ್ಲಿತ್ತು. ನಂತರ ಬೆಳೆಯುತ್ತಾ ಅರೆ ಮಿಲಿಟರಿ ರೂಪದಲ್ಲಿ ಬದಲಾಗುತ್ತಾ ರಜಾಕಾರರು ಎಂಬ ಹೆಸರಿನಲ್ಲಿ ಕಾಣಿಸಿಕೊಂಡರು. ಇದರ ಮುಖಂಡ 'ಕಾಶಿಂರಜ್ವಿ' ಇವನು ಮೂಲತಃ ಮತೀಯವಾದಿಯಾಗಿದ್ದ, ನಿಜಾಂನ ಆಳ್ವಿಕೆಯನ್ನು ಬೆಂಬಲಿಸುತ್ತಾ ನಿಜಾಂ ಸರಕಾರದ ಸವಲತ್ತುಗಳನ್ನು ಸ್ವೇಚ್ಛೆಯಿಂದ ಬಳಸುತ್ತಾ ಮತಾಂಧನಾಗಿ ರೂಪಗೊಂಡನು. ಈ ರಜಾಕಾರರು ಸಂಸ್ಥಾನದ

ತುಂಬಾ ಜನರ ಮೇಲೆ ಕ್ರೌರ್ಯದಿಂದ ದಬ್ಬಾಳಿಕೆ ನಡೆಸತೊಡಗಿದರು. ಅದರಂತೆ ೧೯೪೮ರ ಹೊತ್ತಿಗೆ ಒಂದು ಲಕ್ಷ ರಜಾಕಾರರು ಹೈದರಾಬಾದ್ ಕರ್ನಾಟಕ ಪ್ರಾಂತ್ಯದಲ್ಲಿದ್ದರು.[೫] ಕಾಶಿಂರಜ್ವಿಯು ನಿಜಾಂನ ಆಪ್ತನಾಗಿದ್ದರಿಂದ ಆತನ ತಂತ್ರಗಳು ಫಲಿಸುತ್ತಿದ್ದವು. ನಿಜಾಂರುಗಳ ಸಹಾಯದಿಂದ ರಜಾಕಾರರನ್ನು ರಜ್ವಿಯು ಬೆಳೆಸಿದ. ರಜಾಕಾರರೆಂದರೆ 'ಸ್ವಯಂ ಸೇವಕ' ಎಂದರ್ಥ.[೬] ರಜಾಕಾರರ ಮುಖಂಡನಾದ ಕಾಶಿಂರಜ್ವಿಯು ಅವರಿಗೆ ಲೂಟಿ, ಸುಲಿಗೆ, ದರೋಡೆ, ಅತ್ಯಾಚಾರ ಮುಂತಾದ ಕೆಟ್ಟ ಕಾರ್ಯಗಳನ್ನು ಮಾಡಲು ಅನುಮತಿ ಕೊಟ್ಟನು. ಈ ಭಾಗದ ಜನತೆಯನ್ನು ಹೆದರಿಸಿ ನಿಜಾಂನ ವಶದಲ್ಲಿಡಬೇಕೆಂದು ಅವನ ಅಭಿಪ್ರಾಯವಾಗಿತ್ತು. ಹೈದರಾಬಾದ್ ಕರ್ನಾಟಕ ಪ್ರಾಂತ್ಯದ ಹಿಂದುಳಿದ ಜಿಲ್ಲೆಗಳಲ್ಲಿ ತೀರಾ ಹಿಂದುಳಿದ ಪ್ರದೇಶವಾದ ಕೊಪ್ಪಳ ಜಿಲ್ಲೆಯ ವಿವಿಧ  ಭಾಗಗಳಲ್ಲಿ ರಜಾಕಾರರ ದಿನನಿತ್ಯದ ಕ್ರೌರ್ಯ, ದೌರ್ಜನ್ಯ, ಲೂಟಿ, ದರೋಡೆ, ಮಾನ ಭಂಗಗಳು ಹೆಚ್ಚಾದವು. ರಜಾಕಾರರ ವಿರುದ್ಧ ಹೋರಾಡಲು ಕೊಪ್ಪಳ ಜಿಲ್ಲೆಯ ಶಿವಮೂರ್ತಿಸ್ವಾಮಿ ಅಳವಂಡಿ, ಎಸ್.ಎಂ. ಬಂಗಾರಶೆಟ್ಟರ್, ಪುಂಡಲೀಕಪ್ಪ ಜ್ಞಾನಮೋಠೆ, ವೀರಭದ್ರಪ್ಪ ಶಿರೂರು, ವಿರುಪಾಕ್ಷಪ್ಪ, ಅಗಡಿ ಸಂಗಣ್ಣ ಹಾಗೂ ಪ್ರಮುಖ ರೂವಾರಿಗಳಾದ ಶ್ರೀ ಭೀಮಜ್ಜ ಮುರುಡಿ ಮುಂತಾದ ವಿಮೋಚನಾ ಹೋರಾಟಗಾರರು ಮುಂದಾದರು. ಕಾಶಿಂರಜ್ವಿ ಹಾಗೂ ಮೀರ್-ಉಸ್ಮಾನ್ ಅಲಿಖಾನ್ ಇಬ್ಬರೂ ಸೇರಿ ಶಾಂತಿಗಿಂತ ಧರ್ಮ ಮುಖ್ಯ, ಧರ್ಮವನ್ನು ಉಳಿಸಲು ಹಿಂಸೆಗೂ, ಕ್ರೂರತೆಗೂ ಇಳಿಯಬೇಕು, ಯಾರಿಗೂ ಹೆದರಬಾರದು ಎಂದು ಮುಸ್ಲಿಂ ಜನಾಂಗಕ್ಕೆ ಕೋಮುಭಾವನೆಗಳ ಪ್ರಚೋದನೆಯನ್ನು ನೀಡುವುದರಲ್ಲಿ ನಿರತರಾದರು. ಇನ್ನಷ್ಟು ಮುಂದೆ ಹೋಗಿ ಆಸೆ ಆಮಿಷಗಳನ್ನು ತೋರಿಸಿ ಮತಾಂತರಗೊಳಿಸುವ ಮತಾಂಧ ಕಾರ್ಯಕ್ಕೆ ಕೈ ಹಾಕಿದರು. ಈ ರಜಾಕಾರರು ಮಾಡಿದ ಲೂಟಿ, ದೌರ್ಜನ್ಯಗಳಿಗೆ ಲೆಕ್ಕವಿಲ್ಲ. ಧಾರ್ಮಿಕ ಸ್ವಾತಂತ್ರ್ಯವಿರದ ಈ ಸಂಸ್ಥಾನಗಳ ಪ್ರಾಂತದಲ್ಲಿ ಅವರು ನಡೆದಿದ್ದೇ ದಾರಿ, ಹೇಳಿದ್ದೇ ಕಾನೂನು. ಅಂದು ಸರ್ದಾರ ವಲ್ಲಭಬಾಯಿ ಪಟೇಲ್‌ರು ಸೇನಾಕಾರ್ಯಾಚರಣೆ ನಡೆಸದಿದ್ದರೆ ಇಂದು ನಮ್ಮ ಸ್ಥಿತಿ ಹೇಗೆ ಇರುತ್ತಿತ್ತು ಎಂದು ನೆನಪು ಮಾಡಿಕೊಂಡರೆ ರೋಮಾಂಚನವಾಗುತ್ತದೆ ಎಂದು ವಿಮೋಚನ ಹೋರಾಟಗಾರರೂ, ಹಿರಿಯರೂ ಆದ ಎಸ್.ಎಂ.ಬಂಗಾರಶೆಟ್ಟರ್ ಹೇಳುತ್ತಾರೆ.[೭] ವಿವಿಧ ಸಮುದಾಯ ಮತ್ತು ಧರ್ಮದ ಮೇಲೆ ಸಂಪೂರ್ಣ ಹಿಡಿತವನ್ನು ಹೊಂದಿದ ಇವರು ಮನೆಯಲ್ಲಿ ನಡೆಯುವ ಪ್ರತಿಯೊಂದು ಕಾರ್ಯಕ್ಕೂ ಜಿಲ್ಲಾ ಆಡಳಿತದಿಂದ ಪೂರ್ವಾನುಮತಿ ಪಡೆಯಬೇಕಿತ್ತು. ಹೀಗೆ ಪ್ರತಿಯೊಂದು ವಿಧಿ ವಿಧಾನಗಳಿಗೆ ಅವಿಧೇಯ ಕಾನೂನುಗಳನ್ನು ರೂಪಿಸಿ ಸಾಮಾನ್ಯ ಜನತೆಯ ಮೇಲೆ ಮೊಕದ್ದಮೆಗಳನ್ನು ಹೂಡಿ ಜೈಲಿಗಟ್ಟುವುದು ಸಾಮಾನ್ಯವಾಗಿತ್ತು. ಕೊಪ್ಪಳ ಜಿಲ್ಲೆಯಲ್ಲಿ ಎಲ್ಲಿ ನೋಡಿದರಲ್ಲಿ ರಜಾಕಾರರ ಹಾವಳಿ ಅವರ ಕ್ರೂರ ದೌರ್ಜನ್ಯಗಳು ಸಾಮಾನ್ಯ ಜನತೆಯನ್ನು ಶೋಚನೀಯ ಸ್ಥಿತಿಗೆ ತರುವುದರ ಜೊತೆಗೆ ಅಷ್ಟೇ ಕ್ರೋಧವನ್ನು ಕೂಡ ಉಂಟುಮಾಡಿತ್ತು.

## ೨.೫. ಆರ್ಯ ಸಮಾಜ

ಹಿಂದೂ ಧರ್ಮದ ರಕ್ಷಣೆಯಲ್ಲಿ ಮತ್ತು ಮತಾಂತರದ ವಿರುದ್ಧ ನಡೆದ ಹೋರಾಟದಲ್ಲಿ ಆರ್ಯ ಸಮಾಜದ ಪಾತ್ರ ಸ್ಮರಣೀಯ. ನಿಜಾಂನ ಮತಾಂಧ ನೀತಿಯನ್ನು ವಿರೋಧಿಸಿ ಸಮರ್ಥವಾಗಿ ಎದುರಿಸಿ ಹಿಂದೂಗಳಲ್ಲಿ ಜಾಗೃತಿಯನ್ನುಂಟುಮಾಡಿದರು. ರಜಾಕಾರರ ವಿರುದ್ಧ ಹೋರಾಡಿ ಅನೇಕ ಆರ್ಯ ಸಮಾಜದ ಕಾರ್ಯಕರ್ಯರು ಹುತಾತ್ಮರಾಗಿದ್ದಾರೆ. ಸ್ವಾಮಿ ದಯಾನಂದ ಸರಸ್ವತಿಯವರಿಂದ ಸ್ಫೂರ್ತಿ ಪಡೆದು ಆರ್ಯ ಸಮಾಜದ ಕಾರ್ಯಕರ್ತರು ಸಮಾಜದಲ್ಲಿ ಗಣನೀಯ ಬದಲಾವಣೆ ತರಲು ಪ್ರಯತ್ನಿಸಿದರು.

ಆರ್ಯಸಮಾಜದ ಮುಖಂಡರಲ್ಲಿದ್ದ ಅಸಾಧಾರಣ ಗುಣವೆಂದರೆ ನಿರ್ಭಯತೆ. ನಗರಗಳ ನಡುಭಾಗಗಳಲ್ಲಿ ನಡೆಯುತ್ತಿದ್ದ ಸಾರ್ವಜನಿಕ ಭಾಷಣಗಳಲ್ಲಿ ಹಿಂದೂ ವಿರೋಧಿಗಳನ್ನು ಖಂಡಿಸುತ್ತಾ ಅವರನ್ನ ಬೌದ್ಧಿಕ ಚರ್ಚೆಗಾಗಿ ಆಹ್ವಾನಿಸುತ್ತಿದ್ದ ಶೈಲಿಯು ಸಾಮಾನ್ಯರಲ್ಲಿ ರೋಮಾಂಚನವನ್ನುಂಟು ಮಾಡುತ್ತಿತ್ತು. ಹೈದರಾಬಾದ್ ನಿಜಾಂನು ಆರ್ಯ ಸಮಾಜದ ಕಾರ್ಯಕರ್ತರನ್ನು ಬಂಧಿಸಿ ಇವರ ಚಟುವಟಿಕೆಗಳನ್ನು ಮೊಟಕುಗೊಳಿಸಲು ಪ್ರಯತ್ನಿಸಿದರು. ಆದರೂ ಕೂಡ ಕೊಪ್ಪಳ ಜಿಲ್ಲೆಯ ಕುಕನೂರ, ಯಲಬುರ್ಗಾಗಳಲ್ಲಿ ಆರ್ಯ ಮಂದಿರಗಳು ಸ್ಥಾಪನೆಗೊಂಡವು.[೧೧] ಆರ್ಯ ಮಂದಿರಗಳ ಮೂಲಕ ಶಿಕ್ಷಣ ಪ್ರಸಾರ ಕಾರ್ಯವನ್ನು ಸಹಿತ ಆರ್ಯ ಸಮಾಜವು ಹಮ್ಮಿಕೊಂಡಿತು. ಅದರಂತೆ ೧೯೨೬-೨೭ರ ವೇಳೆಗೆ ಆರ್ಯ ಸಮಾಜದ ಕಾರ್ಯಕರ್ತರು ಸೇರಿ ಹೈದರಾಬಾದ್ ಕರ್ನಾಟಕದ ಪ್ರದೇಶಗಳಾದ ಗುಲ್ಬರ್ಗಾ, ಬೀದರ್, ರಾಯಚೂರು, ಕೊಪ್ಪಳದ ಪ್ರದೇಶಗಳಲ್ಲಿ ಅನೇಕ ಕೇಂದ್ರಗಳನ್ನು ಸ್ಥಾಪಿಸಿದರು. ಆ ನಿಟ್ಟಿನಲ್ಲಿ ಕೊಪ್ಪಳದ ಲಕ್ಷ್ಮಣಗುಡಿ, ಆರ್.ಬಿ.ಬಿಡಪ್‌ರವರು ಆರ್ಯಸಮಾಜದ ತತ್ವಗಳಿಂದ ಪ್ರೇರಿತರಾಗಿ ಅದಕ್ಕಾಗಿ ಎಲ್ಲ ಬಗೆಯಲ್ಲೂ ಶ್ರಮಿಸಿದ್ದಾರೆ.

ಆರ್ಯ ಸಮಾಜವು ಯಾವುದೇ ಕೋಮಿಗೆ ಸೇರಿದ ಸಂಸ್ಥೆಯಾಗಿದ್ದಲ್ಲ. ಇದು ಸರ್ವಧರ್ಮ ಸಹಿಷ್ಣುತಾ ನೀತಿ ಸಂಹಿತೆಗೆ ಪೂರಕವಾಗಿ ಹೋರಾಟ ಮಾಡುವುದೇ ಆಗಿದೆ. ಇಲ್ಲಿ ಕೆಲವು ನಿಷ್ಠಾವಂತ ಮುಸ್ಲಿಂ ಪಂಗಡದವರು ಕೂಡ ಈ ಆರ್ಯ ಸಮಾಜದಲ್ಲಿ ಸೇರಿ ಹೋರಾಟ ನಡೆಸಿದ್ದಾರೆ. ಕೊಪ್ಪಳ ಜಿಲ್ಲೆಯ ಕುಕನೂರಿನ ಎಸ್.ದೇಸಾಯಿರವರು 'ಆರ್ಯ ಸಮಾಜವು ದೀನ ದಲಿತರ ಪರವಾಗಿ ಅಸ್ಪೃಶ್ಯತೆಯ ವಿರುದ್ಧವಾಗಿ ಸಮಾನತೆಯ ತತ್ವವನ್ನು ಪ್ರತಿಪಾದಿಸುತ್ತದೆ' ಎಂದು ಹೇಳಿದ್ದಾರೆ.[೧೨] ಈ ಎಲ್ಲ ಕಾರಣಗಳಿಂದ ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದಲ್ಲಿ ಆರ್ಯ ಸಮಾಜದ ಪಾತ್ರವು ಮಹತ್ವದ್ದಾಗಿದೆ.

## ೨.೬. ಒಕ್ಕೂಟ ಚಳವಳಿ

ಭಾರತಕ್ಕೆ ೧೯೪೭ ಆಗಸ್ಟ್ ೧೫ರಂದು ಸ್ವಾತಂತ್ರ್ಯ ಬಂದರೂ ಹೈದರಾಬಾದ್ ಕರ್ನಾಟಕ ಸಂಸ್ಥಾನ ಸ್ವಾತಂತ್ರ್ಯದ ಕನಸು ನನಸಾಗಲಿಲ್ಲ. ಹೈದರಾಬಾದ್ ಸಂಸ್ಥಾನದ ಕೊನೆಯ ನಿಜಾಂ ಮೀರ್-ಉಸ್ಮಾನ್ ಅಲಿ

ಖಾನನು ಭಾರತದ ಒಕ್ಕೂಟಕ್ಕೆ ಸೇರಲು ನಿರಾಕರಿಸಿದನು. ಇದನ್ನರಿತ ಈ ಭಾಗದ ಮುಖಂಡರು ಜನರಿಗೆ ವಿಮೋಚನಗಾಗಿ ಕರೆಕೊಟ್ಟರು. ಅದರಲ್ಲಿ ಶ್ರೀ ಅಳವಂಡಿ ಶಿವಮೂರ್ತಿಸ್ವಾಮಿ, ಜಯತೀರ್ಥ ರಾಜ ಪುರೋಹಿತ, ಡಿ.ಆರ್.ವಿಠಲ್‌ರಾವ್, ರಾಘುವೇಂದ್ರರಾವ್ ಕಲ್ಲೂರು ಹಾಗೂ ಮಹಾಂತಲಿಂಗಯ್ಯ ಮುಂತಾದವರು ಒಕ್ಕೂಟ ಸೇರಿರಿ ಚಳವಳಿಗೆ ಧುಮುಕಿದರು. ಅದರಂತೆ ರಾಯಚೂರಿನಲ್ಲಿಯೂ ಹರತಾಳವನ್ನು ಆಚರಿಸಿ ಸತ್ಯಾಗ್ರಹ ಮಾಡಿದ ಜಿ.ಹನುಮಂತರಾಯರು, ರಾ.ಗು.ಜೋಷಿ, ನಾರಾಯಣಪ್ಪನವರು ಬಂಧನಕ್ಕೆ ಒಳಗಾದರು. ಕೊಪ್ಪಳದಲ್ಲಿ ಕಾಯಿದೆ ಭಂಗಮಾಡಿ ಸಾಯಂಕಾಲ ಸಾರ್ವಜನಿಕ ಸಭೆಯನ್ನುದ್ದೇಶಿಸಿ ಭಾಷಣ ಮಾಡಿದ ಜನಾರ್ಧನರಾವ್ ವಕೀಲರು, ರಾಮಕೃಷ್ಣಗುಡಿಯವರು ಹೈದರಾಬಾದ್ ಕರ್ನಾಟಕವು ಭಾರತದ ಒಕ್ಕೂಟದಲ್ಲಿ ಸೇರಲಿ ಎಂದು ಗೊತ್ತುವಳಿ ಓದಿದರು.[೮] ನಂತರ ಧ್ವಜವಂದನೆ ಮಾಡಿ ಬಂಧನಕ್ಕೊಳಗಾದರು. ಇದರಂತೆ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನ ಬಂಡೆ ಕೇಶವರಾವ್, ಆರ್.ಎಂ.ಗಂಗಾವತಿಯವರು ಸತ್ಯಾಗ್ರಹ ಮಾಡಿ ಸೆರೆಮನೆ ಸೇರಿದರು. ಕೊಪ್ಪಳ ತಾಲೂಕಿನ ಕಾತರಿಕೆ ಗ್ರಾಮದಲ್ಲಿ ಜನರೊಡಗೂಡಿ ಎಸ್.ಎಂ. ಬಂಗಾರಶೆಟ್ಟರ್ ಸತ್ಯಾಗ್ರಹ ಹಾಗೂ ಧ್ವಜವಂದನೆ ಮಾಡಿ ಬಂಧನಕ್ಕೊಳಗಾದರು. ಹೀಗೆ ದಿನೇದಿನೇ ನಿಜಾಂ ಸರಕಾರದ ವಿರುದ್ಧವಾಗಿ ಘೋಷಣೆಗಳು, ಆಡಳಿತದಲ್ಲಿ ಅಸಹಕಾರ, ಭೂಗತ ಕಾರ್ಯಗಳು, ರಾಜಕೀಯ ಬುಡಮೇಲು ಕೃತ್ಯಗಳು ನಡೆಯುತ್ತಾ ಸಾಗಿದವು. ಇದೇ ರೀತಿಯಾದ ಸ್ವಾತಂತ್ರ್ಯ ದಿನಾಚರಣೆ, ಭಾರತ ಒಕ್ಕೂಟಕ್ಕೆ ಸೇರಿಸಿ ಚಳುವಳಿ ಎಂಬ ಪ್ರತಿಭಟನೆಯನ್ನು ನಿಜಾಮರ ವಿರುದ್ಧವಾಗಿ ಹೈದರಾಬಾದ್ ಸಂಸ್ಥಾನದಲ್ಲಿ ಸ್ವಾತಂತ್ರ್ಯ ದಿನಾಚರಣೆಯನ್ನು ಯಾವ ರೀತಿ ಆಚರಿಸಬೇಕೆಂದು ಅಂದಿನ ಕೊಪ್ಪಳ ಜಿಲ್ಲೆಯ ಹೋರಾಟಗಾರರ ಮುಖಂಡರಾದ ಜಿ.ಕೆ.ಪ್ರಾಣೇಶಾಚಾರ್ಯರು ಪ್ರಕಟಣೆಯನ್ನು ಹೊರಡಿಸಿದರು. ಆ ಪ್ರಕಟಣೆ ಎಂದರೆ ಧ್ವಜಾರೋಹಣ ಸಮಯದಲ್ಲಿ ಹೆಚ್ಚು ಹೆಚ್ಚು ಜನ ಸೇರಬೇಕೆಂಬ ಪ್ರತಿಜ್ಞೆಯನ್ನು ಸ್ವೀಕರಿಸಬೇಕು ಆಜಾದ್ ಹೈದರಾಬಾದ್‌ನ್ನು ಬಹಿಷ್ಕರಿಸಬೇಕು ಎಂಬುದು ಪ್ರತಿಜ್ಞೆಯ ಪ್ರಮುಖ ಅಂಶಗಳಾಗಿವೆ.

ಕೊಪ್ಪಳದ ತರುಣ ಸಂಘದವರು ಧ್ವಜಾರೋಹಣ ಕಾರ್ಯಕ್ರಮವನ್ನು ಗುಪ್ತವಾಗಿ ಚರ್ಚಿಸಿದರು. ಆ ದಿನ ಕೊಪ್ಪಳ ಜಿಲ್ಲೆಯ ಮೇಲೆ ರಾಷ್ಟ್ರಧ್ವಜವನ್ನು ಹಾರಿಸುವ ಕಾರ್ಯಕ್ರಮವನ್ನು ಇರಿಸಿಕೊಂಡಿದ್ದರು. ಆದರೆ ಕೋಟೆಯ ಮೇಲೆ ಪೊಲೀಸರ ಸರ್ಪಗಾವಲು ಇದ್ದುದರಿಂದ ಊರಲ್ಲಿನ ಹನುಮಂತ ದೇವರಗುಡಿಯಲ್ಲಿ ಈ ಕಾರ್ಯಕ್ರಮ ನೆರವೇರಿಸಿದರು. ಈ ಸಂದರ್ಭದಲ್ಲಿ ಶ್ರೀ ಅಗ್ನಿಹೋತ್ರಿ, ವೀರಭದ್ರಪ್ಪ, ನರಸಿಂಗರಾವ್ ಹಂಪಿಕರ್‌ರನ್ನು ಸೆರೆಮನೆಗೆ ಕಳಿಸಲಾಯಿತು. ಕುಕನೂರಿನಲ್ಲಿ ಇಟಗಿ ರಾಘುವೇಂದ್ರರಾವ್ ವಕೀಲ್, ಚೆನ್ನಪ್ಪ ಆಡೂರು ಮಾರ್ತಾಂಡರಾವ್ ಕುಲಕರ್ಣಿಯವರನ್ನು ಒಕ್ಕೂಟ ಸೇರಿರಿ ಚಳವಳಿಯಲ್ಲಿ ನಿರತರಾಗಿದ್ದಕ್ಕೆ ಇವರನ್ನು ಬಂಧಿಸಲಾಯಿತು. ಈ ರೀತಿ ಒಕ್ಕೂಟ ಚಳವಳಿಯಲ್ಲಿ ಅನೇಕರನ್ನು ಬಂಧಿಸಿದರು. ಲಾಠಿ ಪ್ರಹಾರ ಮಾಡಿದರು ಕೂಡ ವಿಮೋಚನ ಹೋರಾಟಗಾರರು ಹೆದರದೆ 'ಭಾರತ್ ಮಾತಾ ಕೀ ಜೈ' ಎಂದು ಕೂಗುತ್ತಾ ಮುನ್ನುಗ್ಗಿದ್ದರು. ಈ ರೀತಿಯಾಗಿ ಹೈದರಾಬಾದ್ ಕರ್ನಾಟಕದ ಜನತೆಯು ನಿಜಾಂನ ವಿರುದ್ಧ ಹೋರಾಡಲು ಮುಂದಾದರು.

## ೨.೭. ಪೊಲೀಸ್ ಕಾರ್ಯಾಚರಣೆ

ಹೈದರಾಬಾದ್ ನಿಜಾಂ ಸಂಸ್ಥಾನದ ಹಿಡಿತದಲ್ಲಿದ್ದ ಕರ್ನಾಟಕದ ಪ್ರದೇಶಗಳಾದ ಬೀದರ್, ಗುಲ್ಬರ್ಗಾ, ರಾಯಚೂರು, ಕೊಪ್ಪಳ ಈ ಪ್ರದೇಶಗಳನ್ನು ಭಾರತದ ಒಕ್ಕೂಟಕ್ಕೆ ಸೇರಿಸಲು ಕೊನೆಯ ನಿಜಾಂನಾದ ಮೀರ್ ಉಸ್ಮಾನ್ ಅಲಿಖಾನ್ ಹಾಗೂ ಸಂಸ್ಥಾನದ ಪ್ರಧಾನಿಯಾದ ಲಾಯಕ್ ಅಲಿ, ಗೃಹಮಂತ್ರಿ ನವಾಬ ಮೋಹಿನ್ ಜಂಗನು ನಿರಾಕರಿಸಿದರು. ಈ ವಿಷಯ ಅರಿತ ರಜಾಕಾರರ ನಾಯಕನಾದ ಕಾಶಿಂರಜ್ವಿಗೆ ಮತ್ತಷ್ಟು ಧೈರ್ಯ ಬಂದಂತಾಯಿತು. ಮತ್ತೆ ಆತನ ದುರಾಡಳಿತ, ದುಷ್ಕೃತ್ಯಗಳು ಹೆಚ್ಚಾಗ ತೊಡಗಿದವು. ಇದರಿಂದ ಸಾಮಾನ್ಯ ಜನತೆಯ ಸ್ಥಿತಿಯು ಶೋಚನೀಯ ಹಾದಿಯಲ್ಲಿತ್ತು. ಪ್ರಾಂತ್ಯಗಳಲ್ಲಿ ಅರಾಜಕತೆಯ ಅಲೆಯು ಮೇರೆ ಮೀರಿತ್ತು. ಇದನ್ನು ತಿಳಿದ ಉಕ್ಕಿನ ಮನುಷ್ಯನೆಂದೇ ಹೆಸರಾದ ಭಾರತದ ಗೃಹಮಂತ್ರಿಗಳಾಗಿದ್ದ ಸರ್ದಾರ್ ವಲ್ಲಭಬಾಯಿ ಪಟೇಲರು ಖೇದಗೊಂಡರು. ಕೂಡಲೇ ಹೈದರಾಬಾದ್ ಸಂಸ್ಥಾನದ ನವಾಬನಿಗೆ ಭಾರತದ ಒಕ್ಕೂಟದಲ್ಲಿ ವೀಲಿನವಾಗಲು ಆದೇಶ ಕಳಿಸಿದರು. ನಿರಾಕರಿಸಿದ ನಿಜಾಂನನ್ನು ತಕ್ಷಣವೇ ದಿನಾಂಕ ೧೦.೦೯.೧೯೪೮ ರಂದು ಸಭೆ ಸೇರಿ ಸರಕಾರ ಜೊತೆ ಮಾತುಕತೆಗಳನ್ನು ನಡೆಸಿ 'ಪೊಲೀಸ್ ಆ್ಯಕ್ಷನ್'ಗೆ ಒಪ್ಪಿಸಿದರು.[೯] ಅದರಂತೆ ೧೩.೦೯.೧೯೪೮ ರಂದು ಆದೇಶವನ್ನು ಜಾರಿಗೆ ತಂದರು. ಆಗ ಭಾರತದ ಮೇಜರ್ ಜನರಲ್‌ರಾದ ಜೆ.ಎನ್.ಚೌಧರಿ, ಲೇ.ಜಿ.ರಾಜೇಂದ್ರ ಸಿನ್ಹ ಅವರಿಗೆ ಹೈದರಾಬಾದ್ ಸಂಸ್ಥಾನದ ಮೇಲೆ ದಾಳಿ ಮಾಡಲು ಅಧಿಕಾರವನ್ನು ಕೊಟ್ಟರು. ಅದರಂತೆ ಗಡಿ ಶಿಬಿರಗಳ ಸಹಕಾರದೊಂದಿಗೆ ಭಾರತದ ಸೈನ್ಯ ನಿಜಾಂ ಸಂಸ್ಥಾನದತ್ತ ಧಾವಿಸಿತು. ಸತತವಾಗಿ ಮೂರು ದಿನಗಳವರೆಗೆ ನಿಜಾಂನ ಪೊಲೀಸರಿಗೂ ಹಾಗೂ ಭಾರತದ ಸೈನ್ಯಕ್ಕೂ ಯುದ್ಧ ನಡೆಯಿತು. ಈ ಸಂದರ್ಭದಲ್ಲಿ ಭಾರತದ ಸೈನ್ಯವು ತನ್ನ ಹೋರಾಟದ ಹಾದಿಯಲ್ಲಿ ಹೈದರಾಬಾದ್ ಪ್ರಾಂತ್ಯದ ಪ್ರದೇಶಗಳನ್ನು ವಶಪಡಿಸಿಕೊಂಡಿತು. ಕೊನೆಯಲ್ಲಿ ಕೊಪ್ಪಳದ ಹತ್ತಿರ ಮುನಿರಾಬಾದ್ ಡ್ಯಾಂನ ತಗ್ಗು ಪ್ರದೇಶದಲ್ಲಿ ಅಡಗಿದ ರಜಾಕಾರರನ್ನು ಭಾರತ ಸೈನ್ಯವು ಹೊಡೆದೊಡಿಸುವಲ್ಲಿ ಪ್ರಯಾಸಪಟ್ಟಿತು. ಶಿಬಿರಗಳ ಸಹಕಾರದಿಂದ ಸಂಪೂರ್ಣ ಯಶಸ್ವಿಯಾಗಿ ದಿನಾಂಕ ೧೭.೦೯.೧೯೪೮ರಂದು ನಿಜಾಂ ದಂಡನಾಯಕನಾದ 'ಮೆ.ಎಂಡ್ರೋಸ'ನು ಭಾರತದ ಸರಕಾರಕ್ಕೆ ಶರಣಾಗತನಾದನು.[೧೦] ವಿದ್ಯುಕ್ತವಾಗಿ ಭಾರತದ ಒಕ್ಕೂಟಕ್ಕೆ ಹೈದರಾಬಾದ್ ಕರ್ನಾಟಕ ಪ್ರಾಂತ್ಯವು ವಿಲೀನವಾಯಿತು. ಭಾರತಕ್ಕೆ ಸ್ವಾತಂತ್ರ್ಯ ಬಂದು ೧೩ ತಿಂಗಳ ನಂತರ ಹೈದರಾಬಾದ್ ಕರ್ನಾಟಕದ ಜನರು ಸ್ವಾತಂತ್ರ್ಯ ಸಂಭ್ರಮವನ್ನು ಆಚರಿಸಿದರು.

ಇಂಥ ಮುಗ್ಧ ಜನರ ಮೇಲೆ ದಬ್ಬಾಳಿಕೆ, ಅತ್ಯಾಚಾರಗಳನ್ನು ಮಾಡಿದ ರಜಾಕಾರರ ಹಾಗು ನಿಜಾಂ ಪೊಲೀಸರ ವಿರುದ್ಧವಾಗಿ ಈ ಭಾಗದ ಹೋರಾಟಗಾರರಾದ ಶ್ರೀ ಶಿವಮೂರ್ತಿಸ್ವಾಮಿ ಅಳವಂಡಿ, ಪುಂಡಲೀಕಪ್ಪ ಜ್ಞಾನಮೋಠೆ, ಮುರುಡಿ ಭೀಮಜ್ಜ, ಇಟಗಿ ವಿರುಪಾಕ್ಷಯ್ಯ, ಜಯತೀರ್ಥ ರಾಜಪುರೋಹಿತ, ವಿಜಯರಾವ್ ದೇಸಾಯಿ, ಶಿರೂರು ವೀರಭದ್ರಪ್ಪ, ರಾಚಯ್ಯ, ಎಸ್.ಎಂ.ಬಂಗಾರಶೆಟ್ಟರ್‌ರವರ ಹೋರಾಟವನ್ನು ಸ್ಮರಿಸುವುದು. ಅವಶ್ಯಕ. ಇವರ ಪ್ರಯತ್ನಗಳಿಂದಲೇ ಈ ಸಾಧನೆ ಸಾಧ್ಯ ಎಂಬುದು ನಿಜ.

## ೨.೮. ವಿಮೋಚನ ಹೋರಾಟದಲ್ಲಿ ಮಾಧ್ಯಮಗಳು

ಮಾನವನು ತನ್ನ ಅನುಕೂಲಕ್ಕೆಂದು ಸೃಷ್ಟಿಸಿದ ಈ ಮಾಧ್ಯಮಗಳು ಕ್ರಮೇಣ ಅವನ ಅಗತ್ಯಗಳನ್ನು ಪೂರೈಸುವ ಸಾಧನಗಳಾಗಿ ಸ್ಥಾನ ಪಡೆದವು. ಹೀಗಾಗಿ ಯಾವುದೇ ಹೋರಾಟಗಳು, ಆಂದೋಲನಗಳು ಯಶಸ್ವಿ ಯಾಗಿ ನಡೆಯಬೇಕಾದರೆ ಸುದ್ದಿಯನ್ನು ಪ್ರಸಾರ ಮಾಡುವ ಮಾಧ್ಯಮಗಳ ಪಾತ್ರ ಪ್ರಮುಖವಾಗಿದೆ. ಪ್ರಾಚೀನ ಕಾಲದಿಂದಲೂ ಈ ಮಾಧ್ಯಮಗಳ ಬಳಕೆ ಬೇರೆ ಬೇರೆ ವಿಧಾನಗಳ ಮೂಲಕ ಕೆಲಸ ನಿರ್ವಹಿಸುತ್ತಿದ್ದವು. ಎಂಬುದಕ್ಕೆ ಅನೇಕ ಕನ್ನಡ ಕಾವ್ಯಗಳಲ್ಲಿ ಇಂಥ ಪ್ರಸಂಗಗಳ ಕುರಿತಾದ ದಾಖಲೆಗಳನ್ನು ಗಮನಿಸಬಹುದು. ನಮ್ಮ ಜನಪದರ ಹಾಡುಗಳು, ಒಡಪುಗಳು, ಲಾವಣಿಗಳು, ಸಣ್ಣಾಟಗಳು, ದೊಡ್ಡಾಟಗಳು, ಬುಲಾಯಿ ಹಾಡುಗಳು ಮತ್ತು ಗೀಗೀ ಪದಗಳು ಸಹಾ ಸ್ವಾತಂತ್ರ್ಯ ಹೋರಾಟದಲ್ಲಿ ಸುದ್ದಿಯನ್ನು ತಲುಪಿಸುವ ಮಹತ್ವದ ಮಾಧ್ಯಮಗಳಾಗಿ ಕೆಲಸ ನಿರ್ವಹಿಸಿರುವುದನ್ನು ಚರಿತ್ರೆಯ ಮೂಲಕ ತಿಳಿಯಬಹುದಾಗಿದೆ.

### ಪತ್ರಿಕೆಗಳು

ಆಧುನಿಕವಾಗಿ ಶೀಘ್ರ ಸುದ್ದಿ ಪ್ರಸಾರ ಮಾಡುವ ಆಕಾಶವಾಣಿ, ದೂರದರ್ಶನ, ಸಿನಿಮಾಗಳಂತೆ ಪತ್ರಿಕೆಗಳು ಸಹಾ ಸ್ವಾತಂತ್ರ್ಯ ಚಳುವಳಿಯಲ್ಲಿ ಹಾಗೂ ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದ ಪ್ರಸಂಗ ಗಳಲ್ಲಿ ಹೆಜ್ಜೆ ಹೆಜ್ಜೆಗೂ ನಿರ್ವಹಿಸಿದ ಕಾರ್ಯವನ್ನು ಇಲ್ಲಿ ಸ್ಮರಿಸಲೇಬೇಕಾಗುತ್ತದೆ.

### ದಿ ಡೆಮಾಕ್ರಾಟ್ ಪತ್ರಿಕೆ

ವಿ.ಎಚ್.ದೇಸಾಯಿ ಅವರ ಸಂಪಾದಕತ್ವದಲ್ಲಿ ೧೯೪೭ ಜನವರೀ ೨೬ರಂದು 'ದಿ ಡೆಮಾಕ್ರಾಟ್' ಪತ್ರಿಕೆಯು ಹೊರ ಬಂದಿತು. 'ಚಂಚಲಗೂಡಾ' ಜೈಲಿನಲ್ಲಿ ಈ ಪತ್ರಿಕೆ ಜನ್ಮ ಪಡೆಯಿತು. ಇದು ತ್ರಿವರ್ಣಧ್ವಜ ಹಾಗೂ ಗಾಂಧೀಜಿಯವರ ಭಾವಚಿತ್ರವನ್ನು ಮುಖಪುಟದಲ್ಲಿ ಮುದ್ರಿಸಿ, ರಾಷ್ಟ್ರೀಯತೆಯನ್ನು ಹೆಚ್ಚಿಸುವ ಲೇಖನಗಳಿಂದ ತುಂಬಿ ಸುಂದರವಾಗಿ ಮೂಡಿ ಬರುತ್ತಿತ್ತು. ಪತ್ರಿಕೆಯ ಸಂಪಾದಕೀಯ ನೀತಿ ಸ್ಪಷ್ಟ ಮತ್ತು ಹರಿತವು ಆಗಿತ್ತು. ಅಲ್ಲದೆ ಮುಂದಿನ ಪೀಳಿಗೆಗೆ ಮಾಹಿತಿಯನ್ನು ಒದಗಿಸುವುದಾಗಿತ್ತು. ರಾಷ್ಟ್ರದ ಅಭಿವೃದ್ಧಿಯ ಜೊತೆಗೆ ಸಾಮಾನ್ಯ ಜನತೆಯ ಹಿತವನ್ನು ಕಾಪಾಡುವ ನಿಟ್ಟಿನಲ್ಲಿ ಪ್ರೇರೆಪಿಸುವ ಶಕ್ತಿಯನ್ನು ಹೊಂದಿತ್ತು. ನಿಜಾಂನು ಹೈದರಾಬಾದ್ ಕರ್ನಾಟಕದ ಹಿಂದೂಗಳ ಮೇಲೆ ತನ್ನ ಮಿತಿಮೀರಿದ ದರ್ಪಿಷ್ಟ ಅಧಿಕಾರವನ್ನು ಚಲಾಯಿಸುತ್ತಿದ್ದನು. ತನ್ನ ಆದೇಶವೇ ಕೊನೆಯದಾಗಿತ್ತು. ಯಾವುದೇ ಚರ್ಚೆ, ವಿಮರ್ಶೆಗೆ ಇಲ್ಲಿ ಅವಕಾಶವಿರಲಿಲ್ಲ. ಇದರಿಂದಾಗಿ ಪ್ರಾಂತ್ಯದಲ್ಲಿ ಲೂಟಿ, ದರೋಡೆಗಳು ವಿರಾಜಮಾನವಾಗಿ ಜರುಗಿದವು. ವಿಮೋಚನ ಹೋರಾಟಗಾರರ, ಮುಖಂಡರ ಬಂಧನಗಳು ಹೆಚ್ಚಾದವು. ಚಂಚಲಗೂಡಾ ಕಾರಾಗೃಹದಲ್ಲಿ ಹುಟ್ಟುಹಾಕಿದ ದಿ ಡೆಮಾಕ್ರಾಟ್ ಪತ್ರಿಕೆ ಕ್ರಾಂತಿಯನ್ನೇ ಎಬ್ಬಿಸಿತು. ಇದರಲ್ಲಿ ಸಂಪಾದಕೀಯ ವಿಭಾಗದಲ್ಲಿ ಬರೆದ ವಿ.ಎಚ್.ದೇಸಾಯಿರವರ

ಲೇಖನಗಳು ವಿಮೋಚನ ಹೋರಾಟಗಾರರಿಗೆ ಸ್ಫೂರ್ತಿಯಾದವು. ಇದರಿಂದ ಸಾಮಾನ್ಯರಲ್ಲಿ ಹೊಸ ಬಗೆಯ ರಾಜಕೀಯ ವಿದ್ಯಮಾನಗಳು ಬೇಗನೆ ತಲುಪುತ್ತಿದ್ದವು. ನಿಜಾಂನ ದರ್ಪಿಷ್ಠ ಆಳ್ವಿಕೆಯನ್ನು ಖಂಡಿಸುವ ಲೇಖನಗಳು ಈ ಪತ್ರಿಕೆಯಿಂದ ಮೂಡಿ ಬಂದವು. ಹೈದರಾಬಾದ್ ಕರ್ನಾಟಕದ ಜನತೆಯಲ್ಲಿ ಹೋರಾಟದ ಅರಿವು ಪಡೆದುಕೊಂಡು ಹಾಗು ರಜಾಕಾರರ ದುಷ್ಕೃತ್ಯಗಳನ್ನು ಸೆದೆಬಡಿಯಲು ಕಂಕಣಬದ್ಧರಾದರು. ವಿಮೋಚನ ಹೋರಾಟದ ಸಂದರ್ಭದಲ್ಲಿ ಪತ್ರಿಕೆಯು ಮಾಡಿದ ಪಾತ್ರ ಅಪಾರವಾಗಿದೆ.

**ಇಮರೋಜ್ ಪತ್ರಿಕೆ**

ಹೈದರಾಬಾದ್ ಸಂಸ್ಥಾನದಲ್ಲಿ ನಿಜಾಂನ ಮತಾಂಧ ನೀತಿಯನ್ನು ಖಂಡಿಸಿ ರಜಾಕಾರರ ಅತ್ಯಾಚಾರಗಳ ಕುರಿತು ಜನತೆಗೆ ಎಳೆಎಳೆಯಾಗಿ ವಿವರಣೆ ನೀಡುತ್ತಿದ್ದ ಪತ್ರಿಕೆಯೆ 'ಇಮರೋಜ್' ಎಂಬ ಉರ್ದು ಪತ್ರಿಕೆ. ಇದರ ಸಂಪಾದಕನಾದ ಶೋಯಬುಲ್ಲಾಖಾನನು ಹೈದರಾಬಾದ್ ಕರ್ನಾಟಕದ ಪ್ರಭಾವಿ ಪರ್ತಕರ್ತ ನಾಗಿದ್ದನು. ಈ ಭಾಗದ ಜನತೆಯಲ್ಲಿ ಕೋಮು ಸೌಹಾರ್ದ ವಾತಾವರಣವನ್ನು ಸೃಷ್ಟಿಸಿದ ಕೀರ್ತಿಯೂ ಈ ಪತ್ರಿಕೆಗೆ ಸಲ್ಲುತ್ತದೆ. ಈ ಪತ್ರಿಕೆಯನ್ನು ಓದುತ್ತಿದ್ದ ಮುಸ್ಲಿಂರು ಕೂಡ ಗಾಂಧಿ ಟೋಪಿ ಧರಿಸಿ ವಿಮೋಚನ ಹೋರಾಟಕ್ಕೆ ಧುಮುಕಿದರು. ಮುಸ್ಲಿಂರಿಗೆ ಅವರದೇ ಉರ್ದುಭಾಷೆಯ ಮೂಲಕ ನಿಜಾಂನ ಸರ್ವಾಧಿಕಾರದ ಬಗ್ಗೆ ಇವರೋಜ ಪತ್ರಿಕೆ ತಿಳಿಸತೊಡಗಿತು.[೧೩] ಯಾವ ಸಂದರ್ಭದಲ್ಲಿ ಹೇಗೆ ಬರೆಯಬೇಕೆಂಬ ಹಾಗೂ ಹೋರಾಟಗಾರರಿಗೆ ಸ್ಫೂರ್ತಿ ತುಂಬುವ ಬುದ್ಧಿವಂತಿಕೆ ಈ ಪತ್ರಿಕೆಯ ಸಂಪಾದಕನಲ್ಲಿತ್ತು. ಇದನ್ನು ಮನಗಂಡ ರಜಾಕಾರರು ಶೋಯಬುಲ್ಲಾಖಾನ್‌ನನ್ನು ಹಾಗೇ ಬಿಟ್ಟರೆ ನಮಗೆ ಉಳಿಗಾಲವಿಲ್ಲವೆಂದು ತಿಳಿದು, ಹೈದರಾಬಾದ್‌ನ ನಡುಬೀದಿಯಲ್ಲಿ ಹಾಡು ಹಗಲೇ ಆತನನ್ನು ಗುಂಡಿಕ್ಕಿಕೊಂದರು. ಹೋರಾಟಗಾರ, ಶ್ರೇಷ್ಠ ಪತ್ರಕರ್ತ, ಅಪೂರ್ವ ವ್ಯಕ್ತಿತ್ವದ ಶೋಯಬುಲ್ಲಾಖಾನ್‌ನು ಸ್ವಾತಂತ್ರ್ಯಕ್ಕಾಗಿ ಪ್ರಾಣತ್ಯಾಗ ಮಾಡಿದನು. ಅವನ ದೇಶಪ್ರೇಮವನ್ನು ನೋಡಿದ ನಲವಡಿ ಶ್ರೀಕಂಠಶಾಸ್ತ್ರಿಯವರು ತಮ್ಮ ಲಾವಣಿಯಲ್ಲಿ ಈ ರೀತಿ ಚಿತ್ರಿಸಿದ್ದಾರೆ.

''ನೀತಿವಂತ ನಿರ್ಮಲ ಮನಸ್ಸಿನ ಇಂಮ್ರೋಜ ಪತ್ರ ಸಂಪಾದಕರು
ಖ್ಯಾತಿವಂತ ಶೋಬುಲ್ಲಾಖಾನರು ಮುಸಲೀಮ್ ಧರ್ಮ ಪ್ರಚಾರಕರು
ಪಾತಕತನವಿದು ಪ್ರಜರ ಕೊಲ್ಲುವುದು ಬೇಡವೆಂದು ನಿಜ ಸಾರಿದರು
ಘಾತಿಸುತವರನು ಕೊಲೆ ಮಾಡಿಸಿದರು ರಜವೀ ರಾಜ್ಯ ಸ್ಥಾಪಕರು''[೧೪]

ಕಾಸಿಂ ರಜ್ವಿಯು ಶೋಯಬುಲ್ಲಾಖಾನ್‌ನನ್ನು ಕೊಲ್ಲಲು ತನ್ನ ಸೈನಿಕರಿಗೆ ಆಜ್ಞೆ ನೀಡಿದನೆಂದು ಈ ಲಾವಣಿಗಳಲ್ಲಿ ಕಂಡುಬರುವುದು.

## ಭಕ್ತ ಬಂಧು ಪತ್ರಿಕೆ

೧೯೧೯-೨೧ರ ಅವಧಿಯಲ್ಲಿ ಕೊಪ್ಪಳದಿಂದ ಪ್ರಕಟವಾದ 'ಭಕ್ತಬಂಧು' ಎಂಬ ಮಾಸಿಕವನ್ನು ಹೈದರಾಬಾದ್ ಕರ್ನಾಟಕದ ಮೊಟ್ಟ ಮೊದಲ ಪತ್ರಿಕೆ ಎಂದು ಗುರುತಿಸಬಹುದು.[೧೫] ಕೊಪ್ಪಳವಲ್ಲದೆ ಬೆಂಗಳೂರು, ದಾವಣಗೆರೆಗಳಿಂದಲೂ ಈ ಪತ್ರಿಕೆ ಮುದ್ರಿತವಾಗುತ್ತಿತ್ತು. ಎಂ.ಚಿದಾಂಬರಯ್ಯರವರು ಈ ಪತ್ರಿಕೆಯ ಸಂಪಾದಕರಾಗಿದ್ದರು. ನಿಜಾಂ ಆಡಳಿತದ ವಿರುದ್ಧವಾಗಿ ಈ ಪತ್ರಿಕೆ ಅನೇಕ ಲೇಖನಗಳನ್ನು ಪ್ರಕಟಿಸಿತು. ಜನತೆಯಲ್ಲಿ ದೇಶ ಪ್ರೇಮ, ತ್ಯಾಗ, ಬಲಿದಾನಗಳ ಮಹತ್ವದ ಬಗ್ಗೆ ಲೇಖನಗಳನ್ನು ಪ್ರಕಟಿಸುತ್ತಿತ್ತು. ೧೯೪೭-೪೮ರ ಸಮಯದಲ್ಲಿ ಕೊಪ್ಪಳ ಭಾಗದ ಜನತೆಯ ಜಾಗೃತಧ್ವನಿಯಾಗಿ 'ಭಕ್ತಬಂಧು' ಪತ್ರಿಕೆ ಕಾರ್ಯ ಮಾಡಿತು.

## ಸಂಯುಕ್ತ ಕರ್ನಾಟಕ ಪತ್ರಿಕೆ

ಹಾಗೆಯೇ ಸಂಯುಕ್ತ ಕರ್ನಾಟಕ, ದಖ್ಖನ್ ಪ್ರಭಾತ್, ಮಿತ್ರವಾಣಿ ಪತ್ರಿಕೆಗಳು ಹಾಗು ಉಗ್ರರೂಪದ ರಾಷ್ಟ್ರೀಯವಾದಿ ಪತ್ರಿಕೆಯೆಂಬ ಹೆಗ್ಗಳಿಕೆಯನ್ನು ಹೊಂದಿದ 'ನಾಗರಿಕ' ವಾರಪತ್ರಿಕೆಗಳು ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದಲ್ಲಿ ಇವುಗಳ ಪಾತ್ರವು ಮಹತ್ವದ್ದಾಗಿದೆ. ಸ್ವಾತಂತ್ರ್ಯ ಪೂರ್ವದಲ್ಲಿ ಧಾರ್ಮಿಕ, ಸಾಮಾಜಿಕ ಮತ್ತು ರಾಜಕೀಯವಾಗಿ, ಜನಜಾಗೃತಿ ಮೂಡಿಸುವಂಥ ಕೆಲಸವನ್ನು ಇಲ್ಲಿ ಆರಂಭವಾದ ಹಲವಾರು ಪತ್ರಿಕೆಗಳು ಸಮರ್ಥವಾಗಿ ಮಾಡಿವೆ.

ಕೊಪ್ಪಳ ಜಿಲ್ಲೆಯಲ್ಲಿ ಪತ್ರಿಕೆಗಳ ಮೂಲಕ ಜನರನ್ನು ವಿಮೋಚನ ಹೋರಾಟಕ್ಕೆ ಅಣಿಗೊಳಿಸುವ ಹಾಗೂ ರಾಷ್ಟ್ರೀಯತೆಯನ್ನು ಪ್ರಚಾರ ಮಾಡುವ ಕಾರ್ಯವು ಭರದಿಂದ ಜರುಗಿತು. ಈ ಜಿಲ್ಲೆಯ ಗಡಿಭಾಗದ ಪ್ರದೇಶವಾದ ಗದಗದಿಂದ ವಿ.ಎಚ್.ದೇಸಾಯಿಯವರ ಸಂಪಾದಕತ್ವದಲ್ಲಿ 'ಕರ್ನಾಟಕ ಬಂಧು' ಎಂಬ ಪತ್ರಿಕೆ ೧೯೪೫ರಲ್ಲಿ ಹೊರ ಬಂದಿತು. ಅವರು ರಾಷ್ಟ್ರೀಯ ಹೋರಾಟದಲ್ಲಿ ತುಂಬಾ ಉತ್ಸುಕನಾಗಿ ಸೇರಿಕೊಂಡು ಹೋರಾಟಕ್ಕೆ ಮುಂದಾಗಿ ಹೋರಾಟದ ಕೂಗಿಗೆ, ಕ್ರಾಂತಿಯ ಕಹಳೆಯನ್ನು ಊದಿದರು. ಇವರು ಕೊಪ್ಪಳ ಜಿಲ್ಲೆಯಲ್ಲಿ ಸಾಮಾನ್ಯ ಜನತೆಯ ಶೋಚನೀಯ ಸ್ಥಿತಿಯ ಹಿನ್ನೆಲೆಗೆ ಕಾರಣವಾಗಿದ್ದ, ನಿಜಾಂ ಹಾಗೂ ರಜಾಕಾರರ ವಿರುದ್ಧ ಖಾರವಾದ ಲೇಖನಗಳನ್ನು ಪ್ರಕಟಿಸಿದರು. ಇಲ್ಲಿನ ಜನತೆ ವಿಮೋಚನ ಹೋರಾಟಕ್ಕೆ ಧುಮುಕಲು ಪ್ರೇರೇಪಿಸಿದ್ದಾರೆ. ೧೯೪೭ ಜನವರಿ ೨೬ರಂದು, 'ದಿ ಡೆಮಾಕ್ರಾಟ್' ಆಂಗ್ಲ ಪತ್ರಿಕೆಯನ್ನು 'ಚಂಚಲಗೂಡಾ' ಜೈಲಿನಲ್ಲಿ ಸೃಷ್ಟಿಸಿ, ಹೊರಡಿಸುತ್ತಿದ್ದರು. ಇದು ಅವರಲ್ಲಿರುವ ಅಪಾರವಾದ ರಾಷ್ಟ್ರ ಪ್ರೇಮವನ್ನು ಎತ್ತಿ ತೋರಿಸುತ್ತದೆ. ಈ ಆಂಗ್ಲ ಪತ್ರಿಕೆಯಲ್ಲಿ ಅನೇಕರು ಬರೆದ ಲೇಖನಗಳು ವಿಮೋಚನ ಹೋರಾಟಕ್ಕೆ ಸ್ಫೂರ್ತಿ ನೀಡುತ್ತಿದ್ದವು. ಇಡೀ ಹೈದರಾಬಾದ್ ಕರ್ನಾಟಕದಲ್ಲಿ ನಿಜಾಂನ ವಿರುದ್ಧವಾಗಿ ರಾಜಾರೋಷವಾಗಿ

ಅಷ್ಟೇ ಜನಪ್ರೀಯತೆ ಹಾಗೂ ಹಲವಾರು ಸ್ವಾತಂತ್ರ್ಯ ಹಾಗೂ ವಿಮೋಚನ ಕಾರ್ಯಕರ್ತರನ್ನು ಸೃಷ್ಟಿಸಿದ ಕೀರ್ತಿ ಶೋಯಬುಲ್ಲಾಖಾನ್‌ರ ನೇತೃತ್ವದಲ್ಲಿ ಹೊರಡುತ್ತಿದ್ದ 'ಇಮರೋಜ' ಎಂಬ ಉರ್ದು ಪತ್ರಿಕೆಗೆ ಸಲ್ಲುತ್ತದೆ. ಈ ಪತ್ರಿಕೆಯು ಇಡೀ ಹೈದರಾಬಾದ್ ನಿಜಾಂನ ಸಂಸ್ಥಾನಕ್ಕೆ ಒಳಪಟ್ಟ ಕರ್ನಾಟಕದ ಬೀದರ, ಗುಲ್ಬರ್ಗಾ, ರಾಯಚೂರು ಹಾಗೂ ಜಹಗೀರು ಜಿಲ್ಲೆಯಾದ ಕೊಪ್ಪಳದಲ್ಲಿ ನಡೆದ ಕಾಸಿಂರಜ್ವಿ ಆಡಳಿತದ ಕುತಂತ್ರಗಳ ಕುರಿತು ಬರೆಯುತ್ತಿತ್ತು. ಶೋಯಬುಲ್ಲಾಖಾನ್‌ನ ಪತ್ರಿಕೆ ಎಂದರೆ ವಿರೋಧಿಗಳಿಗೆ ನಡುಕು ಹುಟ್ಟಿಸುತ್ತಿತ್ತು. ಇದಕ್ಕಾಗಿ ಶೋಯಬುಲ್ಲಾಖಾನ್‌ನನ್ನು ರಜಾಕಾರರು ಬರ್ಬರವಾಗಿ ಹತ್ಯೆ ಮಾಡಿದರು. ದೇಶ ಸ್ವಾತಂತ್ರ್ಯ ಹಬ್ಬದ ಆಚರಣೆ ಆನಂದದ ಕ್ಷಣಗಳ ಜೊತೆಗೆ ನಿಜಾಂ ಸಂಸ್ಥಾನ ಸ್ವಾತಂತ್ರ್ಯ ಭಾರತಕ್ಕೆ ಸೇರದೆ ಅದು ಅನುಭವಿಸುತ್ತಿರುವ ಸ್ಥಿತಿಯ ಬಗ್ಗೆ ಇಲ್ಲಿನ ಜನರನ್ನು ಹುರಿದುಂಬಿಸುವ ನಿಟ್ಟಿನಲ್ಲಿ ಈ ಭಾಗದಲ್ಲಿ ಸಂಯುಕ್ತ ಕರ್ನಾಟಕ ದಿನಪತ್ರಿಕೆಯು ಮೂಡಿತು. ನಿಜಾಂನ ಕ್ರೂರ ನೀತಿ, ಅರಾಜಕತೆ, ಲೂಟಿ ಮುಂತಾದವುಗಳನ್ನು ಬಹಿರಂಗವಾಗಿಯೇ ಪ್ರಕಟಿಸಿ ಎಲ್ಲಾ ಜನತೆಗೆ ಸುದ್ದಿ ತಿಳಿಸಿತು. ಅದರಂತೆ ವಿಮೋಚನ ಹೋರಾಟಗಾರರಿಗೆ ಎಲ್ಲ ಬಗೆಯಲ್ಲೂ ಪ್ರೇರಣೆ ನೀಡಿದ್ದು ಈ ಪತ್ರಿಕೆ. ಕೊಪ್ಪಳ ಭಾಗಗಳಲ್ಲಿ ಎಸ್.ಎಂ. ಬಂಗಾರಶೆಟ್ಟರ್, ವೀರಭದ್ರಪ್ಪ ಶಿರೂರುರವರು ಪತ್ರಿಕೆಗಳಲ್ಲಿ ಸಣ್ಣ ಲೇಖನಗಳನ್ನು ಹೊರಡಿಸುವ ಮೂಲಕ ಜನರಿಗೆ ಹೋರಾಟದ ಸ್ಫೂರ್ತಿಯನ್ನು ನೀಡುವುದರಲ್ಲಿ ಮುಂದಾದರು.

**ಸಾಹಿತ್ಯ**

ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದಲ್ಲಿ ಕೀರ್ತನೆ, ಲಾವಣಿ ಸಾಹಿತ್ಯಪ್ರಕಾರಗಳ ಪಾತ್ರವು ಮಹತ್ವದ್ದಾಗಿದೆ. 'ಕೀರ್ತನ ಕೇಸರಿ' ಎಂದೇ ಹೆಸರಾಗಿದ್ದ ಕೊಪ್ಪಳ ಜಯರಾಮಚಾರ್ಯರು, ರಜಾಕಾರರ ದೌರ್ಜನ್ಯದ ವಿಷಯವಾಗಿ ಕೀರ್ತನೆಗಳನ್ನು ಹೇಳುತ್ತಾ ಜನರನ್ನು ಜಾಗೃತಗೊಳಿಸಿದರು. ನಿಜಾಂ ಸರಕಾರವು ಇವರನ್ನು ಕೀರ್ತಿನ ಮಾಸ್ತರನೆಂದು ನೇಮಕ ಮಾಡಿತ್ತು. ಸದಾ ಗಾಂಧಿ ಟೋಪಿ, ಖಾದಿಗಳನ್ನು ಧರಿಸಿ ರೈಲ್ವೆ ಸ್ಟೇಷನ್ ಬಸ್‌ನಿಲ್ದಾಣಗಳಲ್ಲಿ ಬರುವ ಪ್ರಯಾಣಿಕರಿಗೆ ರಾಷ್ಟ್ರಾಭಿಮಾನ ಹುಟ್ಟಿಸುವ ಕೀರ್ತನೆಗಳನ್ನು ಹೇಳಿ ಹೋರಾಟಕ್ಕೆ ಜನರನ್ನು ಹುರಿದುಂಬಿಸುತ್ತಿದ್ದರು. ಇದನ್ನು ಕಂಡು ನಿಜಾಂ ಸರಕಾರ ಇವರಿಗೆ ಎಚ್ಚರಿಕೆ ನೀಡಿತು. ಕೊನೆಗೆ ಇವರು ತಮ್ಮ ಕೆಲಸಕ್ಕೆ ರಾಜೀನಾಮೆ ನೀಡಿ ಹೋರಾಟಗಾರರಿಗೆ ಸಹಾಯಕರಾಗಿ ನಿಂತರು. ಜಯ ರಾಮಾಚಾರ್ಯರು ತಮ್ಮ ಕೀರ್ತನೆಗಳಲ್ಲಿ ಸ್ವಾತಂತ್ರ್ಯ ಗೀತೆಯನ್ನು ಹಾಡಿ ಜನರ ಮನಪರಿವರ್ತನೆ ಮಾಡುತ್ತಿದ್ದರು. ಜೊತೆಗೆ ವಿಮೋಚನ ಹೋರಾಟಗಾರರಿಗೆ ಸಂಪೂರ್ಣವಾದ ಸುದ್ದಿ ಮಾಹಿತಿಗಳನ್ನು ತಿಳಿಸುತ್ತಿದ್ದರು.

ರಜಾಕಾರರ ಹಾವಳಿಯನ್ನು ನೋಡಿ ಅದನ್ನು ಮುಖ್ಯ ವಸ್ತುವಾಗಿಟ್ಟುಕೊಂಡು ಈ ಭಾಗದ ಚನ್ನಗೌಡ ಮಾಸ್ತರ, ನಲವಡಿ ಶ್ರೀಕಂಠಶಾಸ್ತ್ರಿಗಳು ಲಾವಣಿಗಳನ್ನು ರಚಿಸಿದರು. ಲಾವಣಿಯು ಜನಪದದ ಮುಖ್ಯ ಮಾಧ್ಯಮವಾಗಿದೆ. ಇಡೀ ಘಟನೆ ಚರಿತ್ರೆಯ ವ್ಯಕ್ತಿಯ ನೆಲೆಯಲ್ಲಿ ಸಾಮೂಹಿಕವಾಗಿ ಹೇಳಲು ಹೊರಟಿದ್ದು

ವಿಶೇಷವಾಗಿದೆ. ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟ ನಡೆದಿದ್ದು ನಿಜಾಂ ಹಾಗೂ ರಜಾಕಾರ ರೊಡನೆ. ನಿಜಾಂನ ಅದಕ್ಷ ಆಡಳಿತ ರಜಾಕಾರರ ದೌರ್ಜನ್ಯಗಳ ವಿರುದ್ಧವಾಗಿ ಹೋರಾಟದ ಚಿತ್ರಣವನ್ನು ಲಾವಣಿಗಳಲ್ಲಿ ಕಾಣಬಹುದಾಗಿದೆ. ಲಾವಣಿ ಹಾಗೂ ಗೀಗೀ ಪದಗಳಲ್ಲಿ ಅನೇಕ ಮುಸ್ಲಿಮರು ರಜಾಕಾರರ ಕ್ರೂರ ನೀತಿಯನ್ನು ಪ್ರತಿಭಟಿಸಿದ್ದು ಕಂಡುಬರುತ್ತದೆ. ಯಲಬುರ್ಗಿಯ ಚನ್ನಗೌಡ ಮಾಸ್ತರರ 'ಲಾವಣಿ' ಮತ್ತು 'ಜೀ' ಪದಗಳನ್ನು ಈ ರೀತಿಯಾಗಿ ನೋಡಬಹುದು.

''ಮೊದಲು ರಾಜಧಾನಿ ಸುದ್ದಿ ಕೇಳ್ರಿ
ನಮ್ ನಿಜಾಂರಿರುವರೀಗ ಬಹಳ ಮುಪ್ಪಿನವರಾ
ಹಿರಿಸೊಸೆ ಅಧಿಕಾರ
ಅಂತಾರ ಅವರ ಮನೆಯೊಳು ಬಹಳ ಬಗಿತಾರ ಹೋ ಜೀ
ಇಸ್ಲಾಂ ಅಂಥಾ ಚಲೋದ್ ಇಸ್ಲಾತ್ ಇಂಥಾ ಚಲೋದ್
ಕೇಶ್ರಾಂತ ಅವರ ತಿಳಿಸಿ ಹೇಳ್ಯಾರಾ ಉಳಿದ ಮತಗಳನ್ನೆಲ್ಲಾ ಅವರು
ನಿಜಾಂರ ಮುಂದೆ ಮನಬಲ್ಲಂತೆ ಅಲ್ಲಗಳೇದಾರಾ'' [೧೬]

ಚನ್ನಗೌಡ ಮಾಸ್ತರರು ಜೀ ಪದಗಳ ಮೂಲಕ ಸಂಪೂರ್ಣ ಹೋರಾಟದ ವಿವರವನ್ನು ಕೊಡುತ್ತಾರೆ. ಹೈದರಾಬಾದ್ ಕರ್ನಾಟಕ ಪ್ರದೇಶದಲ್ಲಿ ಈ ರೀತಿಯಾದ ಲಾವಣಿಗಳು ಸಾಕಷ್ಟು ನಮಗೆ ಲಭ್ಯವಾಗುತ್ತವೆ.

## ೨.೯. ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳು

ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದಲ್ಲಿ ಶಿಕ್ಷಣಸಂಸ್ಥೆಗಳು, ಅದರಲ್ಲೂ ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳು ವಹಿಸಿದ ಪಾತ್ರ ಮಹತ್ತರವಾಗಿದೆ. ಕೊಪ್ಪಳ ಭಾಗದ ಅನೇಕ ಕಾರ್ಯಕರ್ತರನ್ನು ಸೃಷ್ಟಿಸಿದ ಕೀರ್ತಿ ಕೊಪ್ಪಳ ಜಿಲ್ಲೆಯ ಯಲಬುರ್ಗ ತಾಲೂಕಿನ ಕುಕನೂರು ವಿದ್ಯಾನಂದ ಗುರುಕುಲಕ್ಕೆ ಸಲ್ಲುತ್ತದೆ. ಹೈದರಾಬಾದು ಕರ್ನಾಟಕದ ಮೊದಲನೆ 'ರಾಷ್ಟ್ರೀಯ ಶಾಲೆ' ಎಂದರೆ ಕೊಪ್ಪಳ ಜಿಲ್ಲೆಯಲ್ಲಿ ಸ್ಥಾಪಿತವಾದ ವಿದ್ಯಾನಂದ ಗುರುಕುಲ, ಸುಮಾರು ೧೯೨೧ಕ್ಕಿಂತ ಮೊದಲೇ ಮಹಾತ್ಮಾ ಗಾಂಧೀಜಿಯವರ ಕರೆಗೆ ಓಗೊಟ್ಟು ನಿಜಾಂ ಕಾಲೇಜ್‌ನಿಂದ ಹೊರಬಿದ್ದಿದ್ದು ಶ್ರೀ ರಾಘವೇಂದ್ರರಾವ್ ದೇಸಾಯಿ ಮತ್ತು ಪೂನಾದ ಫರ್‌ಗೂಸನ್[೧೭] ಕಾಲೇಜ್‌ನಿಂದ ಅದೇ ತಾನೆ ಹೊರಬಂದ ಎಚ್.ರಾಮಸ್ವಾಮಿ ಈ ಇಬ್ಬರು ಯುವಕರು ಶೈಕ್ಷಣಿಕ ಚಟುವಟಿಕೆ ಗಳ ಮೂಲಕ ರಾಷ್ಟ್ರೀಯ ಜಾಗೃತಿಗಾಗಿ ತಮ್ಮ ಜೀವನವನ್ನೇ ಧಾರೆಯರೆದರು. ಅದರ ಫಲವಾಗಿ ಗುರುಕುಲ ಸ್ಥಾಪನೆಯಾಯಿತು. ರಾಷ್ಟ್ರೀಯತಾ ವಿರೋಧಕ ಶಕ್ತಿಗಳೊಂದಿಗೆ, ರಾಘವೇಂದ್ರ ದೇಸಾಯಿಯವರು ಹೋರಾಡಿ,

ಸಂಸ್ಥೆಯನ್ನು ಆದರ್ಶ ಮಾರ್ಗದಲ್ಲಿ ನಡೆಸಿಕೊಂಡು ಬಂದರು. ರಾಷ್ಟ್ರೀಯ ಮನೋಭಾವನೆಯನ್ನು ಬೆಳೆಸುವಲ್ಲಿ ಈ ಗುರುಕುಲ ಅಪಾರ ಪಾತ್ರವನ್ನು ವಹಿಸಿ ಈ ಪ್ರಾಂತ್ಯಕ್ಕೆ ಅನೇಕ ಸಮಾಜ ಸೇವಕರನ್ನು ಮತ್ತು ಕಾರ್ಯಕರ್ತರುಗಳನ್ನು  ಒದಗಿಸಿದೆ. ಈ 'ಗುರುಕುಲ ರಾಷ್ಟ್ರೀಯ ಶಾಲೆ'ಯು ಅನೇಕ ವಿಮೋಚನ ಹೋರಾಟಗಾರರನ್ನು ಸೃಷ್ಟಿಸಿದ ಕೀರ್ತಿಗೆ ಪಾತ್ರವಾಗಿದೆ.

ಮುರುಡಿ ಭೀಮಜ್ಜ, ಶಿರೂರು ವೀರಭದ್ರ, ಹುತಾತ್ಮ ಭೀಮಸೇನರಾವ್ ಇವರುಗಳ ಹೆಸರುಗಳನ್ನು ಇಲ್ಲಿ ಸ್ಮರಣೆಗೆ ತಂದುಕೊಳ್ಳಬಹುದು. ವೀರಭದ್ರಪ್ಪ ಶಿರೂರುರವರು ತಮ್ಮ ಸ್ವಗ್ರಾಮದಲ್ಲಿ ಒಂದು ರಾಷ್ಟ್ರೀಯ ಶಾಲೆ ಸ್ಥಾಪಿಸಿದರು. ಅದೇ ರೀತಿ ರಾಜೂರು, ಸಂಗನಹಾಳಗಳಲ್ಲಿ ರಾಷ್ಟ್ರೀಯ ಶಾಲೆಗಳು ಪ್ರಾರಂಭ ವಾದವು. ಹಾಗೆಯೇ ವಾಚನಾಲಯ, ಪುಸ್ತಕಭಂಡಾರ, ಹರಿಜನಶಾಲೆ, ಖಾದಿಭಂಡಾರಗಳು ಸ್ಥಾಪನೆಗೊಂಡು ಜನರಲ್ಲಿ ರಾಷ್ಟ್ರೀಯ ಮನೋಭಾವನೆಯನ್ನು ಬೆಳೆಸುವಲ್ಲಿ ಯಶಸ್ವಿಯಾದವು.

ಹೈದರಾಬಾದ್ ಕರ್ನಾಟಕದ ಮೊದಲ ರಾಷ್ಟ್ರೀಯ ಶಿಕ್ಷಣ ಸಂಸ್ಥೆಯಾಗಿ ರೂಪಗೊಂಡ ಕೊಪ್ಪಳ ಜಿಲ್ಲೆಯ ಕುಕನೂರಿನ ಗುರುಕುಲ ಶಿಕ್ಷಣ ಸಂಸ್ಥೆಯು, ಈ ಭಾಗದ ವಿಮೋಚನ ಹೋರಾಟಗಾರರಿಗೆ ಸ್ಫೂರ್ತಿ ಹಾಗು ದೇಶಪ್ರೇಮ ಬೆಳೆಸುವಲ್ಲಿ ನೆರವಾಗಿದೆ. ಸಂಸ್ಥಾಪಕ ರಾಘುವೇಂದ್ರ ದೇಸಾಯಿರವರ ಅಪ್ಪಟ ದೇಶ ಪ್ರೇಮವೇ ಈ ಶಿಕ್ಷಣ ಸಂಸ್ಥೆಯ ಕೊಡುಗೆಯಾಗಿದೆ. ಹೈದರಾಬಾದ್ ಕರ್ನಾಟಕದ ಗುಲ್ಬರ್ಗಾ, ರಾಯಚೂರು ಜಿಲ್ಲೆಗಳಂತೆ ಕೊಪ್ಪಳ ಜಿಲ್ಲೆಯಲ್ಲಿಯೂ ಅನೇಕ ರಾಷ್ಟ್ರೀಯ ಶಾಲೆಗಳು, ಶಿಕ್ಷಣ ಸಂಸ್ಥೆಗಳು ಜನ್ಮತಾಳಿದವು.

## ಅಡಿಟಿಪ್ಪಣಿಗಳು

೧. ಸುಭಾಸಚಂದ್ರ ದೊಡ್ಡಮನಿ- 'ಹೈದರಾಬಾದ್ ವಿಮೋಚನ ಆಂದೋಲನದಲ್ಲಿ ಕಲ್ಬುರ್ಗಿ ಜಿಲ್ಲೆ ಶಿಬಿರಗಳ ಪಾತ್ರ' ( ಅಪ್ರಕಟಿತ ಎಂ.ಫಿಲ್ ಪ್ರಬಂಧ) ೨೦೦೨, ಪುಟ-೧೫

೨. ಅಮರೇಶ ನುಗಡೋಣಿ, 'ರಾಯಚೂರು ಜಿಲ್ಲೆಯಲ್ಲಿ ಹೈದರಾಬಾದು ಕರ್ನಾಟಕ ವಿಮೋಚನ ಚಳುವಳಿ' ೨೦೦೦, ಪುಟ-೨೧

೩. ಅದೇ - ಪುಟ-೨೪

೪. ಸೂರ್ಯನಾಥ ಕಾಮತ್ (ಸಂ) 'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು' ೧೯೭೭, ಪುಟ-೭೬೯

೫. ಅಮರೇಶ ನುಗಡೋಣಿ (ಲೇ) ರಾಯಚೂರು ಜಿಲ್ಲೆಯಲ್ಲಿ ಹೈದರಾಬಾದು ಕರ್ನಾಟಕ ವಿಮೋಚನೆ ಚಳುವಳಿ ೨೦೦೦, ಪುಟ-೧೫

೬. ಎಸ್.ಎಂ. ಬಂಗಾರುಶೆಟ್ಟರ್, ''ವಿಮೋಚನೆ ಹೋರಾಟಗಾರರು' (ಸಂದರ್ಶನ ೦೨-೦೨-೦೪)

೭. ಧ್ರುವ ನಾರಾಯಣ (ಸಂ) 'ಸ್ವಾತಂತ್ರ್ಯಾಂದೋಳನ' ರಾಯಚೂರು ಜಿಲ್ಲೆ' ೧೯೭೩, ಪುಟ-೬೩

೮. ಗೋಪಾಲರಾವ್ ಹೇಜಿಬ್ (ಲೇ) 'ಹೈದರಾಬಾದು ಮುಕ್ತಿ ಸಂಘರ್ಷ' ೨೦೦೧, ಪುಟ-೨೨

೯. ಧ್ರುವನಾರಾಯಣ (ಸಂ) 'ಸ್ವಾತಂತ್ರ್ಯಾದೋಳನ' ರಾಯಚೂರು ಜಿಲ್ಲೆ, ೧೯೭೩, ಪುಟ-೬೧

೧೦. ಗೋಪಾಲ್‌ರಾವ್ ಹೇಜಿಬ್ (ಲೇ) 'ಹೈದರಾಬಾದು ಮುಕ್ತಿ ಸಂಘರ್ಷ' ೨೦೦೧, ಪುಟ-೧೫೩

೧೧. ಅದೇ ಪುಟ-೧೫೫

೧೨. ಸುಭಾಸಚಂದ್ರ ದೊಡ್ಡಮನಿ, 'ಹೈದರಾಬಾದು ವಿಮೋಚನ ಆಂದೋಲನದಲ್ಲಿ ಕಲ್ಬುರ್ಗಿ ಜಿಲ್ಲೆ ಶಿಬಿರಗಳ ಪಾತ್ರ' ( ಅಪ್ರಕಟಿತ ಎಂ.ಫಿಲ್. ಪ್ರಬಂಧ) ೨೦೦೨, ಪುಟ-೭೩

೧೩. ಶ್ರೀಕಂಠಶಾಸ್ತ್ರಿ ನಲವಡಿ (ಲೇ) 'ಹೈದರಾಬಾದು ರಜಾಕಾರರ ಲಾವಣಿ' ೧೯೯೮, ಪುಟ-೭

೧೪. ಪಾಟೀಲ್ ಎಚ್.ಎಸ್. (ಸಂ) 'ತಿರುಳ್ಗನ್ನಡ' ಸವಿಸಂಚಿಕೆ (ಹೈದರಾಬಾದ್ ಕರ್ನಾಟಕ) ೧೯೯೩, ಪುಟ-೬೩

೧೫. ಪಾಟೀಲ್ ಎಚ್.ಎಸ್. (ಸಂ), (ಚನ್ನನಗೌಡ, ಜೀ ಪದಗಳು) 'ವಿಮೋಚನೆ' ಪುಟ-೨೬

೧೬. ಧ್ರುವನಾರಾಯಣ (ಸಂ) 'ಸ್ವಾತಂತ್ರ್ಯಾಂದೋಳನ ರಾಯಚೂರು ಜಿಲ್ಲೆ' ೧೯೭೩, ಪುಟ-೨೩, ೨೪

೧೭. ಸಂಯುಕ್ತ ಕರ್ನಾಟಕ ದಿನಪತ್ರಿಕೆ, ದಿನಾಂಕ ೧೭-೯-೧೯೯೮

ಅಧ್ಯಾಯ ೩

## ಕೊಪ್ಪಳ ಜಿಲ್ಲೆಯ ಶಿಬಿರಗಳು

೩.೧. ಶಿಬಿರಗಳ ಹುಟ್ಟು ಮತ್ತು ಬೆಳವಣಿಗೆ

೩.೨. ಮುಂಡರಗಿ ಶಿಬಿರ

೩.೩. ಗಜೇಂದ್ರಗಡ ಶಿಬಿರ

೩.೪. ಇಟಗಿ ಶಿಬಿರ

೩.೫. ಹನುಮನಾಳ ಶಿಬಿರ

# ಅಧ್ಯಾಯ ೩

# ಶಿಬಿರಗಳು

## ೩.೧. ಶಿಬಿರಗಳ ಹುಟ್ಟು ಮತ್ತು ಬೆಳವಣಿಗೆ

ಶಿಬಿರಗಳೆಂದರೆ ಸ್ವಾತಂತ್ರ್ಯ ಹೋರಾಟಕ್ಕಾಗಿ ಆಯಕಟ್ಟಿನ ಪ್ರದೇಶಗಳಲ್ಲಿ ದೇಶ ಪ್ರೇಮಿಗಳು ಹಾಗೂ ಕಾಂಗ್ರೆಸ್ ಕಾರ್ಯಕರ್ತರು ಸೇರಿಕೊಂಡು ರಚಿಸಿಕೊಂಡಿರುವ ಹೋರಾಟಗಾರರ ಪಡೆ. ರಜಾಕಾರರ ದುಷ್ಕೃತ್ಯಗಳು ನಡೆಯದಂತೆ ನೋಡಿಕೊಳ್ಳಲು ಹಾಗೂ ನಿಜಾಂ ಸರಕಾರದ ವಿರುದ್ಧ ಪ್ರತಿರೋಧಕ ಕ್ರಮಗಳನ್ನು ಕೈಗೊಳ್ಳುವುದಕ್ಕಾಗಿ ನಿಜಾಂ ಕರ್ನಾಟಕ ಸರಹದ್ದಿನ ಅನೇಕ ಸ್ಥಳಗಳಲ್ಲಿ ಕಾಂಗ್ರೆಸ್ ಕಾರ್ಯಕರ್ತರ ಶಿಬಿರಗಳನ್ನು ಪ್ರಾರಂಭಿಸಲಾಯಿತು. ವಿಶೇಷವಾಗಿ ಗಂಗಾವತಿಯ ಹೋರಾಟಗಾರರು ಶಿರುಗುಪ್ಪ ಮತ್ತು ಕಂಪ್ಲಿಗಳಲ್ಲಿ ಶಿಬಿರಗಳನ್ನು ಹುಟ್ಟು ಹಾಕಿದರು.

ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದಲ್ಲಿ ಗಡಿಶಿಬಿರಗಳ ಪಾತ್ರವು ತುಂಬಾ ಮಹತ್ವದ್ದಾಗಿವೆ. ಸ್ವಾತಂತ್ರ್ಯ ಹೋರಾಟದ ಅನೇಕ ಮಾದರಿಗಳನ್ನು ಧ್ಯೇಯೋದ್ದೇಶಗಳನ್ನು ಒಳಗೊಂಡ ಸಂಘ-ಸಂಸ್ಥೆಗಳು ಜನ್ಮತಾಳಿದಂತೆ ಈ ಭಾಗದಲ್ಲಿ ಶಿಬಿರಗಳು ಹುಟ್ಟಿಕೊಂಡವು. ಪ್ರಥಮವಾಗಿ ವಿಮೋಚನ ಹೋರಾಟದ ರೂಪರೇಷೆಗಳು ಕೊಪ್ಪಳ ಹಾಗೂ ರಾಯಚೂರು ಜಿಲ್ಲೆಗಳಿಂದಲೇ ಪ್ರಾರಂಭವಾಯಿತೆನ್ನಬಹುದು. ಮೂಲತಃ ವಿಮೋಚನ ಪ್ರತಿಭಟನೆಯಲ್ಲಿ ಯಾವ ಯಾವ ಕೆಲಸಗಳನ್ನು ಎಲ್ಲಿ? ಹೇಗೆ? ಮಾಡಬೇಕೆಂಬ ಯೋಜನೆಯ ಪೂರ್ವ ತಯಾರಿಯೊಡನೆ ಅವುಗಳನ್ನು ಕಾರ್ಯರೂಪಕ್ಕೆ ತರುವುದು ಈ ಶಿಬಿರಗಳ ಮುಖ್ಯ ಕೆಲಸವಾಗಿತ್ತು. ಶಿಬಿರಗಳು ಎಂದ ಕೂಡಲೆ ನಮ್ಮ ಕಣ್ಣೆದುರಿಗೆ ಇಂದು ನಿರಾಶ್ರಿತ ಶಿಬಿರಗಳ ಕಲ್ಪನೆ ಮೂಡುತ್ತದೆ. ಆದರೆ ವಿಮೋಚನ ಹೋರಾಟದ ಶಿಬಿರಗಳಲ್ಲಿ ಇಂತಹ ಯೋಚನೆ ಇರಲಿಲ್ಲ. ಕೇವಲ ನಿಜಾಂರ ಅನುಯಾಯಿಗಳಾಗಿದ್ದ ರಜಾಕಾರರಿಂದ ಯಾವ ಸ್ಥಳಗಳು ದಾಳಿಗೆ ಒಳಗಾಗಿವೆ ಎಂಬುದನ್ನು ತಮ್ಮ ಗುಪ್ತಚಾರರಿಂದ ತಿಳಿದುಕೊಂಡು, ಅಂತಹ ಹಳ್ಳಿಗಳ ಹಾಗೂ ಸಾಮಾನ್ಯ ಜನರ ರಕ್ಷಣೆಗೆ ಮುಂದಾಗಿ ರಜಾಕಾರರ ವಿರುದ್ಧ ಹೋರಾಟ ಮಾಡಿದ್ದಾರೆ. ಹೈದರಾಬಾದ್ ಸಂಸ್ಥಾನಕ್ಕೆ ಒಳಪಟ್ಟ ಕರ್ನಾಟಕದ ಈ ಪ್ರಾಂತ್ಯಗಳನ್ನು ಸ್ವತಂತ್ರ ಭಾರತದ ಮಡಿಲಿಗೆ ಸೇರಿಸುವಂತಹ ಮಹತ್ವದ ಉದ್ದೇಶದಿಂದ ಈ ಶಿಬಿರಗಳು ಹುಟ್ಟಿಕೊಂಡವು. ಓಗೆ ಶಿಬಿರಗಳು ಹುಟ್ಟಲು ಮುಖ್ಯವಾಗಿ ನಿಜಾಂನ ಪರವಾಗಿ ಕಾರ್ಯಗೈಯುವ, ರಜಾಕಾರರ ಕೃತ್ಯಗಳ

ವಿರುದ್ಧವಾಗಿ ಸಾಮಾನ್ಯ ಜನತೆಯನ್ನು ಸಂಘಟಿಸಿದರು. ಯೋಜಿತ ಪ್ರದೇಶದಲ್ಲಿ ಅಂದರೆ ಜಿಲ್ಲೆಯ ಗಡಿಭಾಗದ ಆಯಕಟ್ಟಿನ ಪ್ರದೇಶಗಳಲ್ಲಿ ಶಿಬಿರಗಳನ್ನು ಸ್ಥಾಪಿಸಲು ಸ್ವಾತಂತ್ರ್ಯ ಪ್ರೇಮಿಗಳ ಮುಖಂಡತ್ವದಲ್ಲಿ ಕಾರ್ಯನಿರ್ವಹಿಸಲಾಯಿತು. ಹೈದರಾಬಾದ್ ಕರ್ನಾಟಕ ಪ್ರದೇಶಕ್ಕೆ ಸಂಬಂಧಿಸಿದ ಪ್ರತಿಯೊಂದು ಶಿಬಿರವೂ ಪ್ರಧಾನ ಕಛೇರಿ ಗದಗ ಅಥವಾ ಶಾಖಾ ಕಛೇರಿ ಬಿಜಾಪುರ -ಸೊಲ್ಲಾಪುರಗಳಿಂದ ಬಂದ ನಿರ್ದೇಶನಕ್ಕೆ ಅನುಗುಣವಾಗಿ ಕೆಲಸ ಮಾಡಬೇಕಿತ್ತು. ಕ್ರಿಯಾಸಮಿತಿಯ ಎಲ್ಲಾ ಅಧಿಕಾರಗಳನ್ನು ಪಡೆದಿದ್ದ ಶಿಬಿರಾಧಿಪತಿಯು ಶಿಬಿರದ ಸಂಪೂರ್ಣ ಉಸ್ತುವಾರಿ ನೋಡಿಕೊಳ್ಳುತ್ತಿದ್ದನು. ಪ್ರತಿಯೊಂದು ಶಿಬಿರದಲ್ಲೂ ಸೈನಿಕರಂತೆ ಕರ್ತವ್ಯ ನಿರತರಾಗಿದ್ದ ಕಾಂಗ್ರೆಸ್ ಕಾರ್ಯಕರ್ತರ ಸಂಖ್ಯೆ ೨೫ರಿಂದ ೨೫೦ರವರೆಗೆ ಇರುತ್ತಿತ್ತು. ಗಡಿಶಿಬಿರಗಳಲ್ಲಿ ಮೂರು ಅಂಗಗಳಿರುತ್ತಿದ್ದವು. ೧. ಸಶಸ್ತ್ರ ವಿಭಾಗ ೨. ಗುಪ್ತಚಾರ ೩. ನಿಶಸ್ತ್ರ ವಿಭಾಗ ಹೀಗೆ ಮೂರು ರೀತಿಯ ವಿಭಾಗಗಳನ್ನು ಶಿಬಿರಗಳು ಹೊಂದಿದ್ದವು.

ಎಲ್ಲಾ ಸ್ವಾತಂತ್ರ್ಯಗಳನ್ನು ನಿಜಾಂ ಆಡಳಿತದಿಂದ ಕಳೆದುಕೊಂಡಿದ್ದ ಈ ಭಾಗದ ಜನತೆಗೆ ಪ್ರತಿಭಟನೆ ಮಾಡುವ ಅವಕಾಶವಿರಲಿಲ್ಲ. ರಜಾಕಾರರ ದಬ್ಬಾಳಿಕೆಯಿಂದ ಜನತೆಯ ಕೂಗು ಯಾರಿಗೂ ಕೇಳದಾಯಿತು. ನಿಜಾಂ ಸರಕಾರರ ಜನ ವಿರೋಧಿ, ಧರ್ಮವಿರೋಧಿ, ಚಟುವಟಿಕೆಗಳ ಬಗ್ಗೆ ಮಾತನಾಡುವುದು ದೊಡ್ಡ ಅಪರಾಧವಾಗಿತ್ತು.

ಇದರಿಂದ ವಿದ್ಯಾವಂತರು, ಶೋಷಿತರು, ಒಂದೆಡೆ ಸೇರಿ ಹಲವಾರು ಕಾರ್ಯಕ್ರಮಗಳನ್ನು ರೂಪಿಸಿ, ಪೂರ್ವಯೋಜಿತವಾಗಿ ರಜಾಕಾರರ ಮೇಲೆರಗಿ, ಅವರಲ್ಲಿ ಭಯ ಹುಟ್ಟಿಸುವಂತಹ ಪ್ರತಿರೋಧ ತೋರಿಸಲು ಹಾಗು ಹೈದರಾಬಾದ್ ಕರ್ನಾಟಕವನ್ನು ರಜಾಕಾರರ ಕಪಿಮುಷ್ಠಿಯಿಂದ ಬಿಡುಗಡೆಗೊಳಿಸಲು ಧ್ಯೇಯ-ಧೋರಣೆಗಳನ್ನು ಒಳಗೊಂಡು ಹೈದರಾಬಾದ್ ಕರ್ನಾಟಕದ ಭಾಗಗಳಲ್ಲಿ ಶಿಬಿರಗಳು ಸ್ಥಾಪನೆಗೊಳ್ಳಲು ಆರಂಭವಾದವು. ರಜಾಕಾರರ ಧಾರ್ಮಿಕ ಮತಾಂಧತೆಯನ್ನು ಗಮನಿಸಿದ ರಾಷ್ಟ್ರ ನಾಯಕರು ತಾವಾಗಿಯೇ ಹಿಂದೂಗಳ ಮಾನ ರಕ್ಷಣೆಯ ಅವಶ್ಯಕತೆಯನ್ನು ಅರಿತುಕೊಂಡು ಈ ಶಿಬಿರಗಳನ್ನು ಸ್ಥಾಪಿಸಲು ಅನುಮತಿ ನೀಡಿದರು.

### ೩.೨. ಮುಂಡರಗಿ ಶಿಬಿರ

ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದಲ್ಲಿ ಅತ್ಯಂತ ರೋಚಕ ಹೋರಾಟ ಮಾಡಿದ ಶಿಬಿರವೆಂದರೆ ಮುಂಡರಗಿ ಶಿಬಿರ. ಕೊಪ್ಪಳ ಜಿಲ್ಲೆಯ ಗಡಿ ಭಾಗದಲ್ಲಿ ಸ್ಥಾಪಿತವಾದ ಶಿಬಿರಗಳಲ್ಲಿ ಇದು ಅತ್ಯಂತ ದೊಡ್ಡ ಶಿಬಿರವಾಗಿ ಕಾರ್ಯ ಪ್ರವೃತ್ತವಾಗಿತ್ತು ಎಂದು ಹೇಳಬಹುದು.

ಕಾಶಿಂರಜ್ವಿಯ ನೇತೃತ್ವದಲ್ಲಿ ಈ ಮೊದಲೇ ಪ್ರಾರಂಭವಾಗಿದ್ದ 'ಇತ್ತೇಹಾದ್ ಮುಸಲ್ಮೀನ್' ಸಂಸ್ಥೆಯ ಕೈಗೊಂಬೆಯಾಗಿ ನಿಜಾಂನ ಸರಕಾರ ಒಳಗಾದಾಗ ಈ ರಜಾಕಾರರ ನಾಯಕನಾದ ಕಾಶಿಂರಜ್ವಿಯ ಪ್ರಬಲ

ಪಡೆಯುತ್ತಿದ್ದ ಸಂದರ್ಭದಲ್ಲಿ ಪ್ರಥಮವಾಗಿ ಮುಂಡರಗಿ ಶಿಬಿರದಿಂದ ರಜಾಕಾರರ ದೌರ್ಜನ್ಯಗಳ ಖಂಡನೆ, ನಿಜಾಂನ ಅದಕ್ಷತೆಯ ವಿರುದ್ಧ ಪ್ರತಿಭಟನೆಗಳು ಕೇಳಿ ಬಂದವು. ಈ ಮುಂಡರಗಿ ಶಿಬಿರದ ಶಿಬಿರಾಧಿಪತಿಯಾದ ಶ್ರೀ ಶಿವಮೂರ್ತಿಸ್ವಾಮಿ ಅಳವಂಡಿಯವರ ಸಮರ್ಥ ನಾಯಕತ್ವದಲ್ಲಿ ರಜಾಕಾರರ ಹಾವಳಿ ವಿರುದ್ಧ ಪ್ರತಿಭಟನೆ, ದಾಳಿಗಳನ್ನು ಕೈಗೊಂಡಿತು.[೧] ಕೇವಲ ಮುಂಡರಗಿ ಶಿಬಿರದ ನಾಯಕತ್ವ ಅಲ್ಲದೆ ಕೊಪ್ಪಳ ಜಿಲ್ಲೆಯ ಎಲ್ಲ ಶಿಬಿರಗಳ ಕಮಾಂಡರರಾಗಿ ಶ್ರೀ ಶಿವಮೂರ್ತಿಸ್ವಾಮಿ ಅಳವಂಡಿಯವರು ಕಾರ್ಯಗೈದಿದ್ದು ಅವರ ಹೋರಾಟಶೀಲ ಮನೋಭಾವನೆಯನ್ನು ಸಂಕೇತಿಸುತ್ತದೆ.

ಹೈದರಾಬಾದ್ ಸಂಸ್ಥಾನಗಳಲ್ಲಿ ಕರ್ನಾಟಕದ ಈ ನಾಲ್ಕು ಜಿಲ್ಲೆಗಳಲ್ಲಿನ ಪ್ರಜೆಗಳು ತಮ್ಮ ಸ್ವಾತಂತ್ರ್ಯಕ್ಕಾಗಿ ಸನ್ನದ್ಧರಾಗತೊಡಗಿದರು. ರಜಾಕಾರರ ರಾಕ್ಷಸಿ ಕೃತ್ಯ ದೌರ್ಜನ್ಯಗಳು ಹೆಚ್ಚಾಗತೊಡಗಿದವು. ಮುಗ್ಧ ಪ್ರಜೆಗಳ ಮೇಲೆ ಗುಂಡು ಹಾರಿಸುವುದು, ಮಹಿಳೆಯರನ್ನು ಅವಮಾನ, ಅತ್ಯಾಚಾರದಂಥ ಪಾಶವಿಕೃತ್ಯಗಳು ಎಲ್ಲ ಕಡೆಗೂ ಹಬ್ಬ ತೊಡಗಿದವು. ಈ ರಜಾಕಾರರ ಕೃತ್ಯಗಳಿಗೆ ನಿಜಾಂ ಪೋಲಿಸರ, ಪಠಾಣರ ಬೆಂಬಲವು ಇದ್ದಿತು. ಇದರಿಂದಾಗಿ ಹೈದ್ರಾಬಾದ್ ಕರ್ನಾಟಕದ ಕೊಪ್ಪಳ ಜಿಲ್ಲೆಯ ಈ ಭಾಗದಲ್ಲಿ ಅರಾಜಕತೆ ತಾಂಡವವಾಡುತ್ತಿತ್ತು. ಅದೇ ಸಮಯದಲ್ಲಿ ನಿಜಾಂನ ವಿಶ್ವವಿದ್ಯಾಲಯದಲ್ಲಿ ಓದುತ್ತಿದ್ದ ಶ್ರೀ ಶಿವಮೂರ್ತಿಸ್ವಾಮಿ ಅಳವಂಡಿಯವರ ಮೇಲೆ ತೀವ್ರವಾದ ಪ್ರಭಾವ ಬೀರಿತು. ಆಗಲೇ ನಿಜಾಂನ ವಿರುದ್ಧ ಪ್ರತಿಭಟನೆಯ ಕಹಳೆಯೂದಿದ ಶಿವಮೂರ್ತಿಸ್ವಾಮಿ ಅಳವಂಡಿಯವರು ಜಿಲ್ಲೆಯ ಮುಂಬೈ ಗಡಿ ಪ್ರಾಂತ್ಯವಾಗಿದ್ದ ಮುಂಡರಗಿಯಲ್ಲಿ ಸಭೆ ಸೇರಿ ಡಾ.ಸಿ.ಎಂ. ಚುರ್ಚಿಹಾಳಮಠ, ಶ್ರೀ ಹೆಚ್.ನಾಗಪ್ಪ, ಶಿವಪ್ಪ ಭೂಮರಡ್ಡಿ, ಶ್ರೀ ರಾಚೋಟೆಪ್ಪನವರ ಒಡಗೂಡಿ 'ಮುಂಡರಗಿ' ಶಿಬಿರವನ್ನು ಸ್ಥಾಪಿಸುವಲ್ಲಿ ಮಹತ್ತರ ಪಾತ್ರವನ್ನು ವಹಿಸಿದರು.[೨] ಮುಂಡರಗಿ ಶಿಬಿರವು ಸಶಸ್ತ್ರ ಪಡೆಯ ಕಾರ್ಯಕರ್ತರೊಂದಿಗೆ ಸದಾ ಸನ್ನದ್ಧವಾಗಿರುತ್ತಿತ್ತು.

## ಮುಂಡರಗಿ ಶಿಬಿರದ ಘಟನೆಗಳು

ಈ ಮುಂಡರಗಿ ಶಿಬಿರಕ್ಕೆ ಉಪಶಿಬಿರ ಶಾಖೆಗಳಾಗಿ ತಿಮ್ಮಾಪೂರ, ನರೇಗಲ್, ನಿಡಗುಂದಿ ಕೊಪ್ಪ, ಸೂಡಿ, ಇಟಗಿಗಳನ್ನು ಆಯ್ಕೆ ಮಾಡಲಾಯಿತು. ರಜಾಕಾರರ ವಿರುದ್ಧ ದಾಳಿಗಳನ್ನು ಮಾಡಲು ಹಲವು ರೂಪುರೇಷೆಗಳನ್ನು ಶ್ರೀ ಶಿವಮೂರ್ತಿಸ್ವಾಮಿ ಅಳವಂಡಿ ಯವರ ನೇತೃತ್ವದಲ್ಲಿ ಕೈಗೊಳ್ಳಲಾಯಿತು. ಈ ಮುಂಡರಗಿ ಶಿಬಿರಗಳ ಮೂಲಕ ಪ್ರಥಮವಾಗಿ ಸ್ತ್ರೀಯರ ಹೋರಾಟವು ನಡೆಯಿತು. ಇದರ ಕಾರ್ಯಕೇಂದ್ರ ಅಳವಂಡಿಯ ಶ್ರೀ ಸಿದ್ದೇಶ್ವರ ಮಠವೇ ಮುಖ್ಯ ಕೇಂದ್ರವಾಯಿತು. ಮುಂಡರಗಿ ಶಿಬಿರಾಧಿಪತಿಗಳಾಗಿ, ಹೋರಾಟದ ಹಿರಿತನ ಹೊತ್ತಿದ್ದರಿಂದ, ಪಠಾಣರು, ರಜಾಕಾರರು ಇವರ ಮಠವನ್ನೇ ಲೂಟಿ ಮಾಡಿ ತಮ್ಮ ಮಿಲಿಟರಿ ಕ್ಯಾಂಪ್ ಮಾಡಿಕೊಂಡಿದ್ದಲ್ಲದೆ, ಅಳವಂಡಿಯ ಜನರಿಗೆ ಚಿತ್ರಹಿಂಸೆ ನೀಡಿ, ಸ್ತ್ರೀಯರ ಮಾನಹರಣ ಮಾಡಿದರು. ಹನುಮರೆಡ್ಡಿ ಕಲ್ಗುಡಿಯೆಂಬ ರೈತನನ್ನು ಎಳೆದುಕೊಂಡು ಹೋಗಿ ನೆರೆದ ನೂರಾರು ಜನರೆದುರು ಗುಂಡು ಹಾರಿಸಿ ಕೊಂದರು.[೩]

**ಬೆಟಗೇರಿ ಘಟನೆ**

ಶಿಬಿರಕ್ಕೆ ಉಪ್ಪಿನ ಬೇಟಗೇರಿ ಪಾತರದ ತಾಯಿ ಮಗಳಿಬ್ಬರು ಜೋಗಮ್ಮರಾಗಿ ರಜಾಕಾರರ ಗುಟ್ಟು ತಿಳಿ ಸುತ್ತಿದ್ದರು. (ಲಕ್ಷ್ಮವ್ವ ಪಾತರದ) ಇದನ್ನು ಗಮನಿಸಿದ ಪಠಾಣರು ಹಾಗು ರಜಾಕಾರರು ಇವರಿಗೆ ಚಿತ್ರಹಿಂಸೆ ನೀಡಿ ಕೊಂದು ಹಾಕಿದರು.

ಸಾಮಾನ್ಯ ಕೆಳವರ್ಗದ ಮಹಿಳೆಯರು ಕೂಡ ಮುಂಡರಗಿ ಶಿಬಿರದ ಮೂಲಕ ರಜಾಕಾರರ ಹಾವಳಿಯನ್ನು ಮಟ್ಟಹಾಕಲು ಹಾಗು ಹೈದರಾಬಾದ್ ಕರ್ನಾಟಕ ವಿಮೋಚನೆಗೆ ಇವರು ಮಾಡಿದ ತ್ಯಾಗ ಸ್ಮರಣೀಯವಾದು ದ್ದಾಗಿದೆ.[೪]

**ಕುಕನೂರು ಘಟನೆ**

ಮುಂಡರಗಿ ಶಿಬಿರದ ಅತ್ಯಂತ ಪ್ರಮುಖವಾದ ದಾಳಿಗಳಲ್ಲಿ ಕುಕನೂರ ಪೋಲಿಸ್ ಠಾಣೆಯನ್ನು ಮುತ್ತಿ ಅಲ್ಲಿಯ ಶಸ್ತ್ರಾಸ್ತ್ರಗಳನ್ನು ವಶಪಡಿಸಿಕೊಂಡ ರೀತಿ ಎಂಥವರನ್ನು ಚಕಿತಗೊಳಿಸುತ್ತದೆ. ಇದು ಶಿಬಿರದ ಅತ್ಯಂತ ರೋಮಾಂಚನ ಘಟನೆಗಳಲ್ಲಿ ಒಂದಾಗಿದೆ. ಈ ಶಿಬಿರದ ಮಿಲಿಟರಿ ಕಮಾಂಡರ್‌ರಾಗಿದ್ದ ಬನ್ನಿ ಕೊಪ್ಪದ ಶಂಕರಪ್ಪ ಯರಾಶಿ ಶಸ್ತ್ರ ಸಜ್ಜಿತ ಹೋರಾಟ ಹಾಗೂ ಗೆರಿಲ್ಲಾ ಮಾದರಿಯ ಹೋರಾಟವನ್ನು ಅನುಸರಿಸಿ ಮೂರು ಜನ ರಜಾಕಾರರನ್ನು ಕೊಂದಿದ್ದು ಅವರ ಶೂರತ್ವವನ್ನು ತೋರಿಸುತ್ತದೆ. ಪ್ರಭುರಾಜ ಪಾಟೀಲ್, ತೆಗ್ಗಿನಮನಿ ಶಂಕರಗೌಡ, ಸೋಮಪ್ಪ ವಕೀಲರು, ಶ್ರೀ.ಕೆ.ಸಿ.ಸಾರಂಗ ಮಠರಂಥಹ ತಾಕತ್ತಿನ ವೀರಯೋಧರಿದ್ದು ದರಿಂದಾಗಿ ಮುಂಡರಗಿ ಶಿಬಿರಕ್ಕೆ ಗೆಲವು, ಕೀರ್ತಿ, ಮೆರಗು ಕೂಡಾ ಬಂದಿತ್ತು.

ಈ ಶಿಬಿರವು ಸುತ್ತಮುತ್ತಲಿನ ೪೦ರಿಂದ ೪೮ ಕೀ.ಮಿ. ವ್ಯಾಪ್ತಿಯವರೆಗೆ ತನ್ನ ನಿಯಂತ್ರಣವನ್ನು ಹೊಂದಿತ್ತು. ಕೊಪ್ಪಳ ಭಾಗದ ಗಾಂಧಿಯೆಂದೇ ಪ್ರಸಿದ್ಧರಾದ ಶಿರೂರು ವೀರಭದ್ರಪ್ಪನವರು ಮುಂಡರಗಿ ಶಿಬಿರದ ಪ್ರಮುಖ ಸಲಹೆಗಾರರಾಗಿ ಶಿಬಿರದ ನಾಯಕರಾದ ಶ್ರೀ ಶಿವಮೂರ್ತಿಸ್ವಾಮಿ ಅಳವಂಡಿಯವರ ಮಾರ್ಗದರ್ಶನದಲ್ಲಿ ನಿಜಾಂ ಸರಕಾರಕ್ಕೆ ಪ್ರತಿಭಟನೆ, ಸತ್ಯಾಗ್ರಹಗಳ ಮೂಲಕ ಬಿಸಿ ಮುಟ್ಟಿಸುತ್ತಿದ್ದರು.

ಅದರಂತೆ ಈ ಶಿಬಿರದ ಗೃಹರಕ್ಷಕ ದಳದ ಕಮಾಂಡರ್ ಆಗಿದ್ದ ಡಾ. ಸಿ.ಎಂ.ಚುರ್ಚಿಹಾಳ ಮಠರವರ ಹೋರಾಟ ಅಪ್ರತಿಮವಾಗಿದೆ. ರಾಜಕೀಯ ಸಾಹಿತ್ಯ, ಸಂಸ್ಕೃತಿ, ಧರ್ಮ, ಆಯುರ್ವೇದ ಚಿಕಿತ್ಸೆ ಹಾಗೂ ಇತಿಹಾಸ ಸಂಶೋಧನೆಯ ಜೊತೆಗೆ, ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದಲ್ಲಿ ಕೊಪ್ಪಳ ಜಿಲ್ಲೆಯ ಮುಂಡರಗಿ ಶಿಬಿರದಲ್ಲಿ ಇವರ ಪಾತ್ರವು ಮಹತ್ವದ್ದಾಗಿದೆ. ಇವರು ಶಿಬಿರಕ್ಕೆ ಅಲ್ಲಿಯ ನಾಗರಿಕ ಸೇವಾ ಸಮಿತಿಯ ಮೂಲಕ ಎಲ್ಲ ರೀತಿಯ ನೆರವು ಹಾಗು ಉಚಿತ ವೈದ್ಯಕೀಯ ಚಿಕಿತ್ಸೆ ನೀಡುವಂತ ನಿಷ್ಠುರ ವ್ಯಕ್ತಿತ್ವದ ಉದಾರ ಮನಸ್ಸುಳ್ಳವರಾಗಿದ್ದರು.

ಈ ಶಿಬಿರದ ಕಾರ್ಯಕರ್ತರು ಮೊಟ್ಟ ಮೊದಲನೆ ಕವಲೂರಿನ ಮೇಲೆ ಮಾಡಿದ ದಾಳಿಯ ಅಲ್ಲಿಂದ ಸರಕಾರಕ್ಕೆ ಸಲ್ಲಬೇಕಾಗಿದ್ದ ಮೂರುನೂರು ರೂಪಾಯಿಗಳ ಕಂದಾಯದ ಹಣವನ್ನು ಇವರು ಮಾಡಿದ ದಾಳಿಯಿಂದ ಶಿಬಿರದ ವಶವಾಯಿತು. ಅದನ್ನು ಶಿಬಿರದ ಸಂಘಟನೆಗೆ ಉಪಯೋಗಿಸಬೇಕೆಂದು ಶಿಬಿರದ ಮುಖ್ಯಸ್ಥರು ಸಲಹೆ ನೀಡಿದರು. ನಂತರ ಮುಂಡರಗಿ ಶಿಬಿರವು ರಜಾಕಾರರ ವಿರುದ್ಧ ಅನೇಕ ಯಶಸ್ವಿ ದಾಳಿಗಳನ್ನು ಮಾಡುತ್ತಲೆ ಹೋಯಿತು. ಯಲಬುರ್ಗಾ ತಾಲೂಕಿನ ಕುಕನೂರು ಠಾಣೆಯ ಮೇಲೆ ಮಾಡಿದ ದಾಳಿಯು ಅವರ ಧೈರ್ಯ, ಸಾಹಸಕ್ಕೆ ಹಿಡಿದ ಕನ್ನಡಿಯಾಗಿದೆ.[೫]

ಬೆಳಗಟ್ಟಿಯಲ್ಲಿ ೧೯೪೮ ಜನೆವರಿ ೧೩ ರಂದು ಈ ಮುಂಡರಗಿ ಶಿಬಿರದ ಕಾರ್ಯಕರ್ತರು ಪ್ರಚಾರ ಕಾರ್ಯ ಮಾಡುತ್ತಿದ್ದ ಸಂದರ್ಭದಲ್ಲಿ ಸುಮಾರು ಇನ್ನೂರು ಜನ ರಜಾಕಾರರು ಆ ಗ್ರಾಮಕ್ಕೆ ಆಗಮಿಸುತ್ತಿದ್ದರು. ಜನರಿಗೆ ತೊಂದರೆ ಕೊಡುತ್ತಿದ್ದ ಸುದ್ದಿ ತಿಳಿಯುತ್ತಿದ್ದಂತೆಯೆ ಮುಂಡರಗಿ ಶಿಬಿರದ ಶಸ್ತ್ರಾಸ್ತ್ರಗಳ ನಾಯಕರಾದ ಪ್ರಭುರಾಜ ಪಟೇಲರ ಸಮ್ಮುಖದಲ್ಲಿ ೨೦೦ ಜನ ರಜಾಕಾರರನ್ನು ಸುತ್ತುವರಿದು ಗುಂಡು ಹಾರಿಸ ತೊಡಗಿದರು. ಇವರ ಧೈರ್ಯ ಹಾಗೂ ಸಾಹಸಗಳನ್ನು ಅರಿತ ರಜಾಕಾರರು ದಿಕ್ಕಾಪಾಲಾಗಿ ಓಡಿಹೋದರು ಎಂದು ಹೋರಾಟಗಾರ ಚೆನ್ನಬಸವನಗೌಡ ಅಲಿಪುರ ಹೇಳುವ ಮಾತಿನಲ್ಲಿ ಸ್ವಾತಂತ್ರ್ಯ ಪ್ರೇಮದ ತುಡಿತ ಎದ್ದು ಕಾಣುತ್ತಿತ್ತು.[೬]

## ೩.೩. ಗಜೇಂದ್ರಗಡ ಶಿಬಿರ

ಜವಾಬ್ದಾರಿ ಸರ್ಕಾರದ ರಚನೆ ಮೂಲ ಉದ್ದೇಶವನ್ನು ಇಟ್ಟುಕೊಂಡು ಸ್ಥಾಪಿತವಾದವುಗಳೇ ಈ ಶಿಬಿರಗಳು. ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದಲ್ಲಿ ಅತ್ಯಂತ ಮಹತ್ವದ ಪಾತ್ರವಹಿಸಿ ಅತೀ ಶೀಘ್ರದಲ್ಲಿ ಹೋರಾಟದ ಸ್ಫೂರ್ತಿಯನ್ನು ಚುರುಕುಗೊಳಿಸಿದ ಕೀರ್ತಿ ಗಜೇಂದ್ರಗಡ ಶಿಬಿರಕ್ಕೆ ಸಲ್ಲುತ್ತದೆ. ಈ ಶಿಬಿರದ ಮೂಲಕ ಹೋರಾಟ ಮಾಡಿದ ಸಾಮಾನ್ಯನು ಬೇರೆ ಯಾವ ಶಿಬಿರಗಳಲ್ಲೂ ಇಂತಹ ಸ್ವಾತಂತ್ರ್ಯ ಪ್ರೇಮ, ಭೂಗತ ಹೋರಾಟಗಳನ್ನು ಮಾಡಿರುವುದು ಕಂಡುಬರುವುದಿಲ್ಲ.

ಕೊಪ್ಪಳ ಜಿಲ್ಲೆಯ ಗಡಿಭಾಗದಲ್ಲಿರುವ ಈ ಪ್ರದೇಶ ಇಂದು ಪಕ್ಕದ ಗದಗ ಜಿಲ್ಲೆಗೆ ಸೇರಿದೆ. ಅಂದು ಹೈದರಾಬಾದ್ ಕರ್ನಾಟಕದ ವಿಮೋಚನ ಹೋರಾಟದಲ್ಲಿ ಕೊಪ್ಪಳ ಜಿಲ್ಲೆಯ ಯೂನಿಯನ್ ಪ್ರದೇಶವಾಗಿತ್ತು. ಸ್ವಾಮಿ ರಮಾನಂದ ತೀರ್ಥರ ಪ್ರೇರಣೆಯೇ ಈ ಶಿಬಿರದ ಸ್ಥಾಪನೆಗೆ ಕಾರಣವಾಯಿತು. ಅದರಂತೆಯೆ ಮುರುಡಿ ಭೀಮಜ್ಜನವರು ಶಿಬಿರವನ್ನು ಹುಟ್ಟು ಹಾಕುವಲ್ಲಿ ಪ್ರಮುಖ ಕಾರಣಕರ್ತರಾಗಿದ್ದಾರೆ. ಗಜೇಂದ್ರಗಡ ಶಿಬಿರದ ಶಿಬಿರಾಧಿಪತಿಯಾಗಿ, ಅಪ್ಪಟ ಸ್ವಾತಂತ್ರ್ಯ ಪ್ರೇಮಿ ಹಾಗೂ ಸೇನಾನಿಯಾದ ಶ್ರೀ ಪುಂಡಲೀಕಪ್ಪ ಜ್ಞಾನಮೋಠೆಯವರು ವಹಿಸಿಕೊಂಡರು. ಗಜೇಂದ್ರಗಡ ಶಿಬಿರವು ಮುಖ್ಯವಾಗಿ ಭೂಗತ ಕಾರ್ಯಗಳ ಮುಖಾಂತರ ಹಾಗು ರಾಜಕೀಯ ಬುಡಮೇಲು ಕೃತ್ಯಗಳನ್ನು ಎಸಗುವುದರ ಮೂಲಕ ನಿಜಾಂ ಸರ್ಕಾರದ ಭದ್ರತೆಗೆ ಭಂಗ ತರುವಲ್ಲಿ ಯಶಸ್ವಿಯಾಯಿತು.

೧೯೪೭ ಆಗಸ್ಟ್ ೧೫ ರಂದು ಹೈದರಾಬಾದ್ ಪ್ರಾಂತ್ಯದಲ್ಲಿ ತ್ರಿವರ್ಣ ಧ್ವಜ ಹಾರಿಸುವುದು ಬಹಿಷ್ಕರಿಸಲ್ಪಟ್ಟಿತು. ಈ ಶಿಬಿರದ ವ್ಯಾಪ್ತಿಯಲ್ಲಿ ಬರುವ ಮಾಲಗಿತ್ತಿ ಎಂಬ ಗ್ರಾಮದಲ್ಲಿ ಜನ ಸೇರುವಂತೆ ಕಾಂಗ್ರೆಸ್ಸಿಗರು ಪ್ರಚಾರ ಮಾಡಿದರು. ಇಲ್ಲಿನ ಪ್ರತಿಯೊಂದು ಹಳ್ಳಿಗಳಲ್ಲಿ ಇದು ಪ್ರಚಾರ ಪಡೆಯಿತು. ಈ ಸಮಯದಲ್ಲಿ ಜನಾರ್ಧನರಾವ್ ದೇಸಾಯಿ ಹಾಗೂ ಇತರರು ಪ್ರವಾಸಮಾಡಿ ಜನರಲ್ಲಿ ರಾಷ್ಟ್ರೀಯತೆಯ ಚೈತನ್ಯವನ್ನು ತುಂಬಿದ್ದರು. ಸಾವಿರಗಟ್ಟಲೆ ಜನರು ಈ ಕರೆಗೆ ಧಾವಿಸಿ ಬಂದರು. ಇವರೆಲ್ಲ ಸೇರಿ ಧ್ವಜ ಹಿಡಿದು ನಿಂತರು. ಈ ಸಂದರ್ಭದಲ್ಲಿ ಮಾಲಗಿತ್ತಿಯ ಸೀತಮ್ಮ ಬಡಿಗೇರ ಎಂಬ ಮಹಿಳೆಯು ತ್ರಿವರ್ಣ ಧ್ವಜವನ್ನು ಹಿಡಿದುಕೊಂಡು ಕುಣಿಯುತ್ತಿದ್ದುದನ್ನು ನೋಡಿದ ಶಿಬಿರಾರ್ಥಿಗಳು, ಭಾವಾವೇಶದಿಂದ 'ವಂದೇ ಮಾತರಂ', 'ಜೈಹಿಂದ್', 'ಭಾರತ್ ಮಾತಾಕೀ ಜೈ' ಎಂಬ ಘೋಷಣೆಗಳನ್ನು ಕೂಗಿದರು. ಇದು ರಜಾಕಾರರ ವಿರುದ್ಧ ನಿಜಾಂ ಸರಕಾರಕ್ಕೆ ನೀಡಿದ ಮೊದಲ ಎಚ್ಚರಿಕೆಯಾಯಿತು.

ಹೀಗೆ ಶಿಬಿರದಿಂದ ಹತ್ತು ಮೈಲು ದೂರದಲ್ಲಿದ್ದ ತುಮರಗುದ್ದಿ ಎಂಬ ಚಿಕ್ಕಹಳ್ಳಿಯಲ್ಲಿ ನಿಜಾಂ ಸರ್ಕಾರವು ಒತ್ತಾಯಪೂರ್ವಕವಾಗಿ ಲೇವಿ (ಕಂದಾಯ) ಸಂಗ್ರಹಿಸಿ, ಆ ಗ್ರಾಮದ ಹನುಮಂತ ದೇವರ ಗುಡಿಯಲ್ಲಿ ಇಟ್ಟಿದ್ದರು. ದಿನಾಂಕ ೧೫.೧೦.೧೯೪೭ ರಂದು ಮಧ್ಯರಾತ್ರಿಯಲ್ಲಿ ಈ ಶಿಬಿರದ ಕಾರ್ಯಕರ್ತರು ಗುಂಡು ಹಾರಿಸುತ್ತಾ, ಲೇವಿಧಾನ್ಯ ಕಾಯುತ್ತಿದ್ದವರನ್ನು ಓಡಿಸಿ, ಗ್ರಾಮದ ಕುಲಕರ್ಣಿಯನ್ನು ಬೆದರಿಸಿ ೫೦ ಚೀಲ ಭತ್ತವನ್ನು ರಾತ್ರೋರಾತ್ರಿ ಗಜೇಂದ್ರಗಡ ಶಿಬಿರಕ್ಕೆ ಸಾಗಿಸಿದರು. ಇದು ಈ ಶಿಬಿರದಲ್ಲಿದ್ದವರ, ಕಾರ್ಯಕರ್ತರ ಸಾಹಸ, ಧೈರ್ಯಗಳನ್ನು ಎತ್ತಿ ತೋರಿಸುತ್ತದೆ. ಶಿಬಿರದ ದಾಳಿಗಳಲ್ಲಿ ಅತ್ಯಂತ ಪ್ರಸಿದ್ಧ ಹಾಗೂ ಮಹತ್ವವಾದ ದಾಳಿಯೆಂದರೆ ಹಿರೇವಂಕಲಕುಂಟಿ ಪೊಲೀಸ್ ಸ್ಟೇಶನ್ ಮೇಲೆ ನೇರವಾಗಿ ದಾಳಿ ಮಾಡಿದ್ದು ಒಂದಾಗಿದೆ. ಈ ಗ್ರಾಮದಲ್ಲಿ ನಿಜಾಂ ಪೊಲೀಸರು ಠಿಕಾಣಿ ಹೂಡಿದ್ದರು. ೮-೧೨-೧೯೪೭ರಂದು ಜಿ.ಕೆ.ರಾಜಪುರೋಹಿತರ ನೇತೃತ್ವದಲ್ಲಿ ಒಂದು ದೊಡ್ಡ ಗುಂಪು ಪೊಲೀಸ್ ಸ್ಟೇಶನ್ ಮೇಲೆ ದಾಳಿ ಮಾಡಿತು.[೭] ದಾಳಿಯ ಸಂದರ್ಭದಲ್ಲಿ ಹನ್ನೆರಡು ಜನ ನಿಜಾಂರು ಪೊಲೀಸರನ್ನು ಕಟ್ಟಿಹಾಕಿ ಅಲ್ಲಿದ್ದ ಶಸ್ತ್ರಾಸ್ತ್ರಗಳನ್ನು ಪಡೆದುಕೊಂಡರು. ಈ ಕಾರ್ಯಾಚರಣೆಯಲ್ಲಿ ಪುಂಡಲೀಕಪ್ಪನವರ ಸಹೋದರರಾದ ಕೋಟೆಪ್ಪ, ಚಿನ್ನಪ್ಪ, ಸೇತುರಾಮಚಾರ್ಯರು ಪ್ರಮುಖವಾಗಿ ಭಾಗವಹಿಸಿದ್ದಾರೆ. ಇದು ನಿಜಾಂನಿಂದ ತೀವ್ರ ಪ್ರತಿಕ್ರಿಯೆಗೆ ಒಳಗಾಗಿ, ದಾಳಿಯಲ್ಲಿ ಪಾಲ್ಗೊಂಡವರನ್ನು ಬಂಧಿಸಲು ಆದೇಶ ಹೊರಡಿಸಿತು. ಮಾಲಗಿತ್ತಿ ಗ್ರಾಮದಲ್ಲಿ ರಜಾಕಾರರ ಠಾಣೆಯು ಹಗಲಿನಲ್ಲಿ ದರೋಡೆ, ಅತ್ಯಾಚಾರ, ದೌರ್ಜನ್ಯಗಳನ್ನು ವಿರಾಜಮಾನವಾಗಿ ನಡೆಸುತ್ತಿತ್ತು. ಇದರಿಂದ ತೊಂದರೆ ಗೊಳಗಾದ ಜನರು ಈ ಗಜೇಂದ್ರಗಡ ಶಿಬಿರದ ಕಾರ್ಯಕರ್ತರೊಡನೆ ಸೇರಿಕೊಂಡು ೨.೧.೧೯೪೮ರಂದು ರಜಾಕಾರರ ಕ್ಯಾಂಪಿನ ಮೇಲೆ ಸಶಸ್ತ್ರ ಹೋರಾಟ ಪ್ರಾರಂಭಿಸಿದರು. ನಂತರ ನಡೆದ ಗುಂಡಿನ ಚಕಮುಕಿ ಹಾಗೂ ನಾಡಬಾಂಬ್ ಸ್ಫೋಟದಿಂದ ಏಳು ಜನ ಕಾಯ್ದಿಟ್ಟ ನಿಜಾಂ ಪೊಲೀಸರನ್ನು ಕೊಂದರು. ಇದು ಅವರ ಹೋರಾಟಕ್ಕೆ ಸ್ಫೂರ್ತಿಯಾಗಿ ಹೈದರಾಬಾದ್ ಕರ್ನಾಟಕ ಪ್ರಾಂತ್ಯವನ್ನು ಶೀಘ್ರವಾಗಿ ನಿಜಾಂನಿಂದ ಪಡೆಯಲು ನೆರವಾಯಿತು.

ಇದೇ ಬಗೆಯಲ್ಲಿ ೧೯೪೮ ಜನವರಿ ೪ ರಂದು ದೊಣ್ಣೆಗುಡ್ಡದ ಸುಂಕದಕಟ್ಟೆಯನ್ನು ಸುಡಲು ಹೊರಟಾಗ ನಿಜಾಂ ಪೊಲೀಸ್ ಪಡೆಯು ಎದುರಾಯಿತು. ಈ ಹೋರಾಟದಲ್ಲಿ ಯೋಧರು, ಶಿಬಿರದ ಕಾರ್ಯಕರ್ತರು ಸ್ಟನ್‌ಗನ್, ರೈಫಲ್, ಕೋವಿ ಉಪಯೋಗಿಸಿ ಪೊಲೀಸ್ ಪಡೆಯನ್ನು ನಡುಗುವಂತೆ ಮಾಡಿದರು. ಅದೇ ರೀತಿ ಒಬ್ಬ ರಜಾಕಾರನನ್ನು ಕೊಂದದ್ದು ನಿಜಾಂ ಸರಕಾರಕ್ಕೆ ನುಂಗಲಾರದ ತುತ್ತಾಯಿತು. ಈ ಘಟನೆಯ ನಂತರ ಮಹಾತ್ಮಗಾಂಧೀಜಿಯ ಸಾವಿನ ಸುದ್ದಿಯನ್ನು ಕೇಳಿ ಈ ಶಿಬಿರದ ವಿಮೋಚನ ರೂವಾರಿಗಳು, ಹೋರಾಟಗಾರರು ಕಂಬನಿಗೆರೆದು ಶ್ರದ್ಧಾಂಜಲಿ ಅರ್ಪಿಸಿ ಪ್ರತಿಜ್ಞೆಗೈದರು. ಇದು ಮುಂದಿನ ವಿಮೋಚನ ಹೋರಾಟಕ್ಕೆ ಕಾರಣೀಭೂತವಾಯಿತು. ಗಜೇಂದ್ರಗಡ ಶಿಬಿರದ ಧರ್ಮದರ್ಶಿ, ಸ್ಫೂರ್ತಿಯ ಚಿಲುಮೆಯಾದ ಮುರುಡಿ ಭೀಮಜ್ಜನವರು ೧೫ ನೇ ಫೆಬ್ರುವರಿ ೧೯೪೮ ರಂದು ರಜಾಕಾರದ ದೌರ್ಜನ್ಯಗಳ ವಿರುದ್ಧವಾಗಿ ನಿಜಾಂ ಸರಕಾರದ ವಿರುದ್ಧ ಸತ್ಯಾಗ್ರಹ ಕುಳಿತರು. ಭೀಮಜ್ಜನವರು ಗಾಂಧೀಜಿಯ ಮಂತ್ರವನ್ನು ಪಠಿಸುತ್ತಲೇ ಪ್ರತಿಭಟನೆಯನ್ನು ಪ್ರಾರಂಭಿಸಿದರು. ಸಾವಿರಾರು ಕಾರ್ಯಕರ್ತರು ಸೇರಿಕೊಂಡು ಸ್ವಾತಂತ್ರ್ಯಕ್ಕಾಗಿ ಜಯಕಾರ ಹಾಕಿದರು.[೮] ಕ್ಷಣಾರ್ಧದಲ್ಲಿಯೇ ನಿಜಾಂ ಪೊಲೀಸರು ವಾಹನಗಳಲ್ಲಿ ಬಂದು ಭಾರಿ ಲಾಠಿ ಪ್ರಹಾರ ಮಾಡಿದರು. ನಂತರ ಭೀಮಜ್ಜ ಹಾಗು ಅವರ ಹಿಂದೆ ಇದ್ದ ೧೨ ಜನರನ್ನು ಪೊಲೀಸರು ಬಂಧಿಸಿ ಕುಷ್ಟಗಿ ಜೈಲಿಗೆ ತಳ್ಳಿದರು. ಆಮೇಲೆ ರಾಯಚೂರು ಜೈಲಿಗೆ ಸ್ಥಳಾಂತರ ಮಾಡಿದರು. ಜೈಲಿನಲ್ಲಿ ಧ್ಯಾನ ಮಗ್ನರಾದ ಭೀಮಜ್ಜರು, ಆಮರಣಾಂತ ಉಪವಾಸ ಕೈಗೊಂಡರು. ಜನರ ಪ್ರತಿರೋಧವನ್ನು ನೋಡಿ ನಿಜಾಂ ಸರ್ಕಾರವು ಅವರನ್ನು ಬಿಡುಗಡೆ ಮಾಡಿತು.

ಆಗಸ್ಟ್ ೨, ೧೯೪೮ ರಲ್ಲಿ ಭಾರತ ಸರ್ಕಾರವು ಹೈದರಾಬಾದ್ ಸಂಸ್ಥಾನದ ಬಗ್ಗೆ ಶ್ವೇತಪತ್ರ ಹೊರಡಿಸಿತು. ಅಲ್ಲಿ ನಡೆಯುತ್ತಿದ್ದ ಅನ್ಯಾಯ, ಅರಾಜಕತೆ, ಹಿಂಸಾಚಾರಗಳನ್ನು ಖಂಡಿಸಿ ರಜಾಕಾರರ ವಿರುದ್ಧ ಕೆಂಡಕಾರಿ ನಿಜಾಂನ ಸ್ಥಾನಮಾನಗಳ ಬಗ್ಗೆ ವಿವರಣೆಯನ್ನು ನೀಡಿತು. ಭಾರತ ಸರ್ಕಾರವು ಹೈದರಾಬಾದ್ ಕರ್ನಾಟಕವನ್ನು ಖಂಡಿತವಾಗಿ ಹಸ್ತಕ್ಷೇಪ ಮಾಡಿ ಸ್ವತಂತ್ರಗೊಳಿಸುವುದೆಂದು, ತಿಳಿದ ಕೆಲ ಅವಕಾಶವಾದಿಗಳು, ಸತ್ಯಾಗ್ರಹದ ಹೆಸರಿನಲ್ಲಿ ಜೈಲು ಸೇರಿದರು. ನಿಜಾಂ ಪೊಲೀಸರು, ರಜಾಕಾರ, ಪಠಾಣರು, ತಮ್ಮ ಕಾಲ ಸನ್ನಿಹಿತವಾಗಿದೆ ಎಂದು ತಿಳಿದು ಅಮಾಯಕರ ಮೇಲೆ ದಬ್ಬಾಳಿಕೆ, ದೌರ್ಜನ್ಯಗಳನ್ನು ಕೈಗೊಂಡರು. ಇದಕ್ಕೆ ಯಲಬುರ್ಗಾ ತಾಲೂಕ ತಹಶೀಲು ಕಛೇರಿ ಕುಖ್ಯಾತಿಪಡೆಯಿತು. ಇದನ್ನರಿತ ಪುಂಡಲೀಕಪ್ಪನವರು ೧೦.೯.೧೯೪೮ ರಂದು ಶಿಬಿರದ ಎಲ್ಲಾ ಕಾರ್ಯಕರ್ತರ ಜೊತೆಗೂಡಿ ಸಮರಸನ್ನಾಹ ರೂಪದಲ್ಲಿ ಶಿಬಿರದಿಂದ ಯಲಬುರ್ಗಾದ ಕಡೆಗೆ ನಡೆದರು. ನಿಜಾಂ ಸೈನ್ಯಕ್ಕೂ, ಶಿಬಿರದ ಕಾರ್ಯಕರ್ತರ ನಡುವೆ ಸಶಸ್ತ್ರ ಹೋರಾಟವೇ ನಡೆದು, ಯಲಬುರ್ಗಾ ತಹಶೀಲು ಕಛೇರಿಯನ್ನು ವಶಪಡಿಸಿಕೊಂಡರು. ಶಸ್ತ್ರಾಸ್ತ್ರ ಹಾಗೂ ದಾಖಲೆಗಳನ್ನು ಜಪ್ತಿ ಮಾಡಿ ಎಲ್ಲವನ್ನು ವಶಪಡಿಸಿಕೊಂಡು ಗಜೇಂದ್ರಗಡ ಶಿಬಿರಕ್ಕೆ ಸಾಗಿಸಿದರು. ಇದು ಶಿಬಿರದ ಸಶಸ್ತ್ರ ದಾಳಿಯ ಹೋರಾಟದ ಮುಖ್ಯ ಘಟನೆಯಾಗಿದೆ. ಗೌರಿಪುರ ಘಟನೆ, ದೋಟಿಹಾಳ ಪ್ರಕರಣಗಳು ಹಾಗೂ ಹುಲಿಹೈದರ

ಜಹಗೀರ್ ತಹಶೀಲ್‌ದಾರನಿಗೆ ಲಾಠಿ ಏಟುಗಳ ಘಟನೆಗಳು ಪ್ರಮುಖವಾಗಿವೆ. 'ಶಿಬಿರದ ಕಾರ್ಯಕರ್ತರ ಅಪ್ರತಿಮ ಹೋರಾಟದ ಕೆಚ್ಚೆದೆಗಳನ್ನು ತೋರಿಸುವಲ್ಲಿ ಈ ಘಟನೆಗಳು ಬಹುಮುಖ್ಯವಾದದ್ದಾಗಿವೆ. ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದಲ್ಲಿ ಕೊಪ್ಪಳ ಜಿಲ್ಲೆಯ ಶಿಬಿರಗಳಲ್ಲಿ ಸಶಸ್ತ್ರ ಹೋರಾಟ ವನ್ನು ಮಾಡಿದ ಕೀರ್ತಿ ಈ ಗಜೇಂದ್ರಗಡ ಶಿಬಿರಕ್ಕೆ ಸಲ್ಲುತ್ತದೆ.'[೯] 'ಶ್ರೀ ಪುಂಡಲೀಕಪ್ಪ ಜ್ಞಾನಮೋಠೆಯವರ ಶಿಸ್ತಿನ ನಾಯಕತ್ವ, ಸ್ವಾತಂತ್ರ್ಯ ಪ್ರೇಮ, ಸಮಾಜಸೇವೆ ಇವುಗಳನ್ನು ಕೊನೆಯವರೆಗೂ ಅವರನ್ನು ಗಜೇಂದ್ರಗಡ ಶಿಬಿರಕ್ಕೆ ಶಿಬಿರಾಧಿಪತಿಯಾಗಿ ಇರುವಲ್ಲಿ ನೆರವಾಯಿತು. ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟ ದಲ್ಲಿ ಗಜೇಂದ್ರಗಡ ಶಿಬಿರದ ಪಾತ್ರ ಸ್ಮರಣೀಯವಾದುದಾಗಿದೆ.'[೧೦]

## ೩.೪. ಇಟಗಿ ಶಿಬಿರ

'ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದಲ್ಲಿ ಅತ್ಯಂತ ತೀವ್ರತರವಾದ ಹೋರಾಟವನ್ನು ಮಾಡಿ ಜನರಲ್ಲಿ ಕ್ರಾಂತಿಯ ಕಿಡಿಯನ್ನು, ಸ್ವಾತಂತ್ರ್ಯದ ಕನಸನ್ನು ನನಸಾಗಿಸುವಲ್ಲಿ ಕೊಪ್ಪಳ ಜಿಲ್ಲೆಯ (ಗಡಿ ಪ್ರದೇಶವಾದ ಇಂದಿನ ಗದಗ ಜಿಲ್ಲೆಗೆ ಒಳಪಟ್ಟ) ಇಟಗಿ ಶಿಬಿರದ ಸಾಧನೆ ಅಪೂರ್ವವಾದುದ್ದಾಗಿದೆ. ಈ ಪ್ರದೇಶದ ೧೩ ಹಳ್ಳಿಗಳನ್ನು ಸೇರಿಸಿ, ಅದರಲ್ಲಿ ಗುಳಗುಳಿ, ಮುಗಳಿ, ಶಾಂತಗಿರಿ, ಹಿರೇ ಅಳಗುಂಡಿ, ತಳ್ಳಿಹಾಳ, ಹೊನ್ನಿಗನೂರು, ಗುಡ್ಡದ ಮಲ್ಲಾಪುರ ಸಂಕನೂರು, ಶಿರಗುಂಪಿ, ಕಾತ್ರಾಳು ಈ ಹಳ್ಳಿಗಳನ್ನು ಸೇರಿಸಿಕೊಡು ಇಟಗಿ ಶಿಬಿರವನ್ನು ರಚಿಸಲಾಯಿತು. 'ಆರ್ಝಾದ ಆಯ್‌ಲೆಂಡ್'[೧೧] ಎಂಬ ಹೆಸರಿನಿಂದ ನಾವು ೧೫ ಆಗಸ್ಟ ೧೯೪೭ ರಲ್ಲಿಯೇ ಈ ಎಲ್ಲ ಹಳ್ಳಿಗಳಲ್ಲಿ ರಾಷ್ಟ್ರ ಧ್ವಜವನ್ನು ಹಾರಿಸಿದ ಕೀರ್ತಿ ಈ ಶಿಬಿರಕ್ಕೆ ಸಲ್ಲುತ್ತದೆ.

ಶ್ರೀ ವಿರೂಪಾಕ್ಷಯ್ಯನವರು ಈ ಶಿಬಿರದ ಶಿಬಿರಾಧಿಪತಿಯಾಗಿ ಕಾರ್ಯನಿರ್ವಹಿಸಿದ್ದಾರೆ. ಇಟಗಿ ಶಿಬಿರದಲ್ಲಿ ೧೩೦೦ ಹೋಮಗಾರ್ಡ್ಸ್ ಇದ್ದರು. ಇವರಿಗೆಲ್ಲಾ ಮಿಲಿಟರಿ ಡ್ರೆಸ್, ಸೇನಾ ಉಪಕರಣ, ವಿವಿಧ ಆಯುಧಗಳನ್ನು ತರಬೇತಿಗಾಗಿ ಹಾಗೂ ರಜಾಕಾರರ ವಿರುದ್ಧ ಸಾಮಾನ್ಯ ಜನರ ರಕ್ಷಣೆಗಾಗಿ ಉಪಯೋಗಿ ಸುತ್ತಿದ್ದರು.

ಇಟಗಿ ಶಿಬಿರದ ನಾಯಕರು, ಮಹಿಳೆಯರು ರಜಾಕಾರರಿಂದ ತಪ್ಪಿಸಿಕೊಳ್ಳಲು ಹಲವು ತಂತ್ರಗಳನ್ನು ರೂಪಿಸಿಕೊಂಡಿದ್ದರು. ಅದರಲ್ಲಿ ಮುಖ್ಯವಾಗಿ ರಜಾಕಾರರಿಗೆ ಖಾರದ ಪುಡಿಯನ್ನು ಎರಚುವುದು, ಗುಪ್ತ ಮಾಹಿತಿಗಳನ್ನು ಕಾರ್ಯಕರ್ತರಿಗೆ ತಿಳಿಸುವುದು ಮುಂತಾದವುಗಳ ಬಗ್ಗೆ ತರಬೇತಿ ನೀಡಲಾಯಿತು. ಹನುಮಸಾಗರದಲ್ಲಿ ಬಾವುದ್ದೀನ್ ಎಂಬ ರಜಾಕಾರ ಮುಖಂಡನಿದ್ದ. ಇಲ್ಲಿ ನಿಜಾಂನ ಸೈನಿಕರು, ರಜಾಕಾರರು ಇರುತ್ತಿದ್ದರು. ಇವರು ಇಟಗಿ ಶಿಬಿರದ ಸುತ್ತಮುತ್ತ ಆಗಾಗ ದಾಳಿ ಮಾಡುತ್ತಿದ್ದರು. ದಿನಾಂಕ ೧೩.೧೨.೧೯೪೭ ರಂದು ರಜಾಕಾರರಿಗೂ ಇಟಗಿ ಶಿಬಿರದ ಕಾರ್ಯಕರ್ತರಿಗೂ ಮಾಲಗಿತ್ತಿಯಲ್ಲಿ ನಡೆದ ಭಯಂಕರ ಗುಂಡಿನ

ಚಕಮುಕಿಯಲ್ಲಿ ೮ ಜನ ಪಠಾಣರು ಬಲಿಯಾದರು. ಶಿಬಿರದ ಕೆಲವರಿಗೆ ಗಾಯವಾದರೂ ಪ್ರಾಣಾಪಾಯದಿಂದ ಪಾರಾದರು. ಅದೇ ರೀತಿ ಶಿಬಿರದ ಮುಖಂಡನಾದ ರಾಮಜಿಯು ೮.೨.೧೯೪೮ ರಂದು ಗುಡ್ಡದ ಮಲ್ಲಾಪುರ ಕಣವಿಯಲ್ಲಿ ಅವಿತು ರಜಾಕಾರರನ್ನ ಕೊಲ್ಲಲು ಹೊಂಚುಹಾಕಿದ್ದನು. ಆದರೆ ವಿಷಯ ತಿಳಿದು ವೇಷ ಬದಲಿಸಿದ ರಜಾಕಾರರು ರಾಮಜಿಯ ಮೇಲೆ ಗುಂಡಿನ ಮಳೆಗೆರೆದು ಬಲಿ ತೆಗೆದುಕೊಂಡರು. ಇದರಿಂದ ಮತ್ತಷ್ಟು ರೋಸಿಹೋದ ಶಿಬಿರದ ಕಾರ್ಯಕರ್ತರು ರಜಾಕಾರರ ಹಾಗು ಪಠಾಣರ ದುಷ್ಕೃತ್ಯಗಳನ್ನು ಮಟ್ಟಹಾಕಲು ಯೋಚಿಸಿದರು.

ಹೊಲದಲ್ಲಿ ಬೆಳೆದ ಈಚಲ ಗಿಡಗಳನ್ನು ಕಡಿದು ಸಾಗುವಳಿಗೆ, ಅನುಕೂಲ ಮಾಡಿದರು. ಇಟಗಿ, ಸಂಕನೂರು, ಮ್ಯಾಗೇರಿಗಳಲ್ಲಿದ್ದ ಸುಂಕದ ಕಟ್ಟೆಗಳ ಮೇಲೆ ದಾಳಿ ಮಾಡಿ ಅಲ್ಲಿನ ಕಾಗದ ಪತ್ರಗಳನ್ನು ನಾಶ ಮಾಡಿ ಹಣವನ್ನು ದೋಚಿ ಶಿಬಿರಕ್ಕೆ ಉಪಯೋಗಿಸಿಕೊಂಡರು. ಹಾಗೂ ಮುಂಡರಗಿ, ಗಜೇಂದ್ರಗಡ, ಕಂಪ್ಲಿಯ ಶಿಬಿರಗಳೊಂದಿಗೆ ಸದಾ ಒಡನಾಟದೊಂದಿಗೆ (ಪ್ರತಿಕ್ಷಣ) ಶಿಬಿರಗಳ ಮಾಹಿತಿಗಳನ್ನು ಪಡೆಯುತ್ತಿದ್ದರು. ತನ್ಮೂಲಕ ಅತಿ ಶೀಘ್ರವಾದ ಕಾರ್ಯಾಚರಣೆಯನ್ನು ಜರುಗಿಸುತ್ತಿದ್ದರು. ಈ ಇಟಗಿ ಶಿಬಿರಕ್ಕೆ ಅಂದಾನಪ್ಪ ದೊಡ್ಡಮೇಟಿ, ಕ್ರಾಂತಿವೀರ ವಾಲಿ ಚನ್ನಪ್ಪನವರು ಮುಂಡರಗಿಯ ಶಿಬಿರಾಧಿಪತಿಗಳು, ಅನೇಕ ಸ್ವಾತಂತ್ರ್ಯ ಯೋಧರು, ಸಲಹೆ ಹಾಗು ನೆರವುಗಳನ್ನು ನೀಡುತ್ತಿದ್ದರು.

ದಿನಾಂಕ ೨೦.೬.೧೯೪೮ ರಂದು ಇಟಗಿ ಶಿಬಿರದಲ್ಲಿ ಸ್ವಾಮಿ ರಮಾನಂದತೀರ್ಥರ ಸನ್ನಿಧಿಯಲ್ಲಿ ಕಾರ್ಯ ಕರ್ತರ ಸಭೆಯನ್ನು ಆಯೋಜಿಸಿದ್ದರು. ಇಲ್ಲಿ ನೆರೆದ ಸುಮಾರು ಎಂಟರಿಂದ ಹತ್ತು ಸಾವಿರ ಜನರನ್ನು ಉದ್ದೇಶಿಸಿ ಸ್ವಾಮಿ ರಮಾನಂದತೀರ್ಥರು ಕ್ರಾಂತಿಕಾರಿ ಭಾಷಣ ಮಾಡಿದರು ಎಂದು ಶ್ರೀ ವ್ಹಿ.ಎ.ಮಳಗಿಯವರು ಹೇಳುವ ಮಾತಿನಲ್ಲಿ ಕ್ರಾಂತಿಯ ತುಡಿತವಿತ್ತು. ಕೊಪ್ಪಳ ಜಿಲ್ಲೆಯ ಗಡಿಭಾಗದಲ್ಲಿ ಅತ್ಯಂತ ಪ್ರಭಾವಿತ ಹೋರಾಟ ನೀಡಿದ ಶಿಬಿರಗಳಲ್ಲಿ ಇಟಗಿ ಶಿಬಿರವು ಬಹಳ ಮಹತ್ವದ್ದಾಗಿದೆ. '೧೯೪೭ ರಲ್ಲಿ ಇಟಗಿ ಶಿಬಿರದ ಸುತ್ತಮುತ್ತ ಹಳ್ಳಿಗಳನ್ನು ಒಳಗೊಂಡು 'ಆಝಾದ್ ಆಯ್‌ಲ್ಯಾಂಡ್' ಎಂದು ನಾಮಕರಣಗೊಳಿಸಿ ಕೊಂಡಿತ್ತು.'[೧೨]

## ೩.೫. ಹನುಮನಾಳ ಶಿಬಿರ

ಇಂದಿನ ಹನುಮನಾಳ ಗ್ರಾಮವು, ಹಿಂದೆ ಧಾರವಾಡ ಜಿಲ್ಲೆಗೆ ಸೇರಿ ಯೂನಿಯನ್ ಪ್ರದೇಶವಾಗಿತ್ತು. ಇದು ಗಡಿಭಾಗದ ಪ್ರದೇಶವಾದ್ದರಿಂದ ಮುಂಬೈ ಪ್ರಾಂತ್ಯದ ಸೇನಾ ಠಾಣೆಗಳು ಇಲ್ಲಿದ್ದವು. ಇವರ ಸಹಕಾರ ಹಾಗೂ ನೈತಿಕ ಬೆಂಬಲವು ಹನುಮನಾಳ ಸ್ವಾತಂತ್ರ್ಯ ಯೋಧರ ಶಿಬಿರಕ್ಕೆ ಇತ್ತು.

ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದಲ್ಲಿ ಈ ಶಿಬಿರದ ಪಾತ್ರವು ಮಹತ್ವದ್ದಾಗಿದೆ. ಈ ಹನುಮನಾಳ ಶಿಬಿರದ ಸುತ್ತಮುತ್ತಲಿನ ಹಳ್ಳಿಗಳ ಮೇಲೆ ರಜಾಕಾರರ ಹಾವಳಿಯು ಹೆಚ್ಚಾಯಿತು. ಈ ಪ್ರದೇಶದ ಹೆಣ್ಣು ಮಕ್ಕಳ ಮೇಲೆ ಅತ್ಯಾಚಾರ, ದರೋಡೆಗಳಂತಹ ದುಷ್ಕೃತ್ಯಗಳು ಹೆಚ್ಚಾದವು. ಇನ್ನೊಂದು ಕಡೆ ಕಾಂಗ್ರೆಸ್ಸಿನ ಮುಖಂಡರು, ಶಿಬಿರದ ಕಾರ್ಯಕರ್ತರು, ದೇಶಪ್ರೇಮಿ ಭೂಗತ ಶಿಬಿರಾರ್ಥಿಗಳು, ಜನರನ್ನು ರಜಾಕಾರರ ವಿರುದ್ಧ ಎತ್ತಿಕಟ್ಟಿದರು. ಆದರೂ ಕೂಡ ಇಲ್ಲಿನ ಜನರು ರಜಾಕಾರರಿಗೆ ಭಯ ಬಿದ್ದರು. ಇಲ್ಲಿ ಅಕ್ಕಪಕ್ಕದ ಗ್ರಾಮಗಳಾದ ಕಡಿವಾಳ, ಪಟ್ಟಲಚಿಂತಿ, ಗುಡ್ಡದ ಮಲ್ಲಾಪುರ, ತುಗ್ಗಲಡೋಣಿ, ಶ್ಯಾಡಲಗೇರಿ ಮೊದಲಾದ ಹಳ್ಳಿಗಳ ಜನರು ಊರುಬಿಟ್ಟು ರಜಾಕಾರರಿಂದ ಸುರಕ್ಷಿತವಾದ ಮುಂಬೈ ಗಡಿಪ್ರಾಂತ್ಯದ ಅಡವಿಯಲ್ಲಿ ಬೀಡುಬಿಟ್ಟರು. ಅನೇಕ ತೊಂದರೆಗಳ ನಡುವೆಯೂ ರಜಾಕಾರರ ವಿರುದ್ಧ ಹೋರಾಡಲು ಶಿಬಿರದ ರೂಪುರೇಷೆಗಳನ್ನು ರಚಿಸಿಕೊಂಡರು. ಇದಕ್ಕೆ ಗಜೇಂದ್ರಗಡ ಶಿಬಿರದಿಂದ ಸಹಕಾರವು ದೊರೆಯಿತು. ಹನುಮನಾಳ, ಶಿಬಿರವು ಗಜೇಂದ್ರಗಡ ಶಿಬಿರಕ್ಕೆ ಪೂರಕವಾಗಿ ಕಾರ್ಯಗಳನ್ನು ರೂಪಿಸುತ್ತಿತ್ತು. ಮೂಗುನೂರು, ಕಡಿವಾಳ ಗ್ರಾಮದಲ್ಲಿ ರೈತರಿಂದ ಒತ್ತಾಯ ಪೂರ್ವಕವಾಗಿ ಕಂದಾಯ ವಸೂಲಿ ಮಾಡುತ್ತಿದ್ದನ್ನು ಶಿಬಿರದ ಕಾರ್ಯಕರ್ತನಾದ ಸಿದ್ದಪ್ಪನು ಜನರ ಜೊತೆಗೂಡಿ ಪ್ರತಿಭಟಿಸಿದನು. ಗ್ರಾಮದೊಳಗೆ ರಜಾಕಾರರು ಹಾಗೂ ನಿಜಾಂ ಪೊಲೀಸರು ಬರದಂತೆ ನಿರ್ಬಂಧ ವಿಧಿಸಿದರು. 'ಈ ಘಟನೆಯು ಹೈದರಾಬಾದ್‌ವರೆಗೂ ಹೋಯಿತು. ಕೂಡಲೇ ಜಾಗೃತರಾದ ಕಾರ್ಯಕರ್ತರು ಹೋರಾಟವನ್ನು ಮತ್ತಷ್ಟು ತೀವ್ರಗೊಳಿಸಿ ರಜಾಕಾರರನ್ನು ನಿದ್ದೆಗೆಡಿಸಿದರು. ಮುಂದಿನ ಹೋರಾಟ ಹಾಗು ದಾಳಿಗಳ ರೂಪುರೇಷೆಗಳನ್ನು ಸಿದ್ಧಪಡಿಸಿದ ಜನಾರ್ಧನ ದೇಸಾಯಿಯವರು, ಶಿಬಿರಕ್ಕೆ ರಾಚಪ್ಪ ಸೂಡಿಯವರನ್ನು ಶಿಬಿರಾಧಿಪತಿಯಾಗಿ ನೇಮಿಸಿದರು.'[೧೩]

ಮೊದಲು ಹನುಮನಾಳ ಶಿಬಿರದ ವತಿಯಿಂದ ಸುತ್ತಮುತ್ತ ಗ್ರಾಮಗಳ ಜನರಿಂದ 'ರಜಾಕಾರರ ಹಾವಳಿ ವಿರುದ್ಧ ಬೇಸತ್ತಿದ್ದೇವೆ ನಮ್ಮನ್ನು ಸ್ವತಂತ್ರಗೊಳಿಸಿ' ಎಂದು ಭಾರತ ಸರ್ಕಾರಕ್ಕೆ ಮನವಿ ಮೂಲಕ ಸಹಿ ಸಂಗ್ರಹಿಸಿದರು. ಅದರಂತೆ ಅಂದಿನ ಪ್ರಧಾನಿ ಜವಹರಲಾಲ್ ನೆಹರುರವರಿಗೂ ಪತ್ರವನ್ನು ರವಾನಿಸಿದರು. ನಂತರ ಕುಷ್ಟಗಿ ತಾಲೂಕಿನ ನಿಲೋಗಲ್ ಗ್ರಾಮದಲ್ಲಿ ಪಠಾಣ ಸೈನಿಕರು ಇದ್ದರು. ಹನುಮನಾಳ ಶಿಬಿರದ ಕಾರ್ಯಕರ್ತರು ರಾಚಪ್ಪ ಸೂಡಿಯ ನೇತೃತ್ವದಲ್ಲಿ ರಾತ್ರೋರಾತ್ರಿ ಪಠಾಣರ ಕಛೇರಿಗೆ ಬೆಂಕಿ ಹಚ್ಚಿ ಬಂದರು.

ಇನ್ನೊಂದು ಈ ಶಿಬಿರದ ಮಹತ್ವದ ಸಾಧನೆಯೆಂದರೆ ಬಿಳಿಕಲ್ ಗ್ರಾಮದ ಸುಮಾರು ೫೦೦ ಆಕಳು, ಎಮ್ಮೆ, ಎತ್ತು ಇವೆಲ್ಲವುಗಳನ್ನು ಪಠಾಣರು, ರಜಾಕಾರರು ಸೇರಿ, ಹೊಡೆದುಕೊಂಡು ಹೋಗುವ ಸಂದರ್ಭವು, ಶಿಬಿರಕ್ಕೆ ವಿಷಯ ತಿಳಿಯಿತು. ಸುಮಾರು ಪ್ರಾಣಿಗಳು, ಹತ್ಯೆಯಾಗುತ್ತವೆ ಎಂದು ಶಿಬಿರದ ಗುರನಗೌಡ, ರಾಘವೇಂದ್ರ ರಾವ್, ಕಾಳಪ್ಪ ಬಡಿಗೇರ, ಲಕ್ಷ್ಮಪ್ಪ ಮೊದಲಾದವರು ಎರಡು ಮೈಲು ದೂರ ರಜಾಕಾರರನ್ನು ಬೆನ್ನುಹತ್ತಿ ಗುಂಡಿನ ಬೆದರಿಕೆ ಒಡ್ಡಿ ಸುಮಾರು ೪೪೫ ದನಗಳನ್ನು ರಕ್ಷಿಸಿ ಶಿಬಿರಕ್ಕೆ ತಂದು ಉಪಚರಿಸಿ

ಸಂಬಂಧಿಸಿದವರಿಗೆ ಹಿಂದಿರುಗಿಸಲು ಮುಂದಾದರು. ನಿಜಾಂ ಸರ್ಕಾರದಲ್ಲಿ ಅಧಿಕಾರಿಗಳಾದ ವಾಲಿಕಾರರ ಟಪಾಲು ಕಸಿಯುವಿಕೆ, ಸರಕು ಸಾಗಾಣಿಕೆಗೆ ಅಡ್ಡಿ, ಕಂದಾಯ ವಸೂಲಿಗೆ ತಡೆ ಹೀಗೆ ಪ್ರತಿಯೊಂದರಲ್ಲೂ ನಿಜಾಂ ಸರ್ಕಾರದ ವಿರುದ್ಧವಾಗಿ ಕಾರ್ಯಕೈಗೊಂಡರು. ಇದು ರಜಾಕಾರರ ದುಷ್ಕೃತ್ಯ, ಅಪಚಾರಗಳನ್ನು, ನಿಜಾಂನಿಗೆ ತಿಳಿಸುವುದಾಗಿತ್ತು.

ಈ ಶಿಬಿರವು ಕೊಪ್ಪಳ ಜಿಲ್ಲೆಯಲ್ಲಿದ್ದ ಇತರ ಶಿಬಿರಗಳಿಗಿಂತ ವಿಶಿಷ್ಟತೆಯನ್ನು ಪಡೆದುಕೊಂಡಿದೆ. ಏಕೆಂದರೆ ಇದೊಂದು ಯೂನಿಯನ್ ಪ್ರದೇಶದಲ್ಲಿ ಇದ್ದ ಶಿಬಿರವಾದ್ದರಿಂದ ಅತ್ತ ಮುಂಬೈ ಪ್ರಾಂತ್ಯದ ಸೈನ್ಯದಿಂದಲೂ, ಹೊಂಗಾರ್ಡ್‌ಗಳಿಂದಲೂ, ಸಹಕಾರ, ಬೆಂಬಲವು ಹನುಮನಾಳ ಶಿಬಿರಕ್ಕೆ ಇದ್ದುದರಿಂದ ಈ ಶಿಬಿರವು ಸ್ವಾತಂತ್ರ್ಯ ಸೇನಾನಿಗಳ ತರಬೇತಿ ಶಿಬಿರವಾಗಿ ಮಾರ್ಪಟ್ಟಿತ್ತು. ಸಾವಿರಾರು ಜನರು ಈ ಶಿಬಿರದ ಸುತ್ತ ಆಶ್ರಯ ಪಡೆದು ನೆಮ್ಮದಿ ಜೀವನದ ಜೊತೆಗೆ ಶಿಬಿರಾರ್ಥಿಗಳಿಗೆ ಅನ್ನ ವಸತಿಗಳ ಸಹಾಯವನ್ನು ಮಾಡುತ್ತಿದ್ದರು. 'ಈ ಶಿಬಿರದ ನಾಯಕರಲ್ಲಿ ಒಬ್ಬರಾದ ಸಿದ್ದಪ್ಪ ಹೇಳುವ ಮಾತಿನಲ್ಲಿ ಎಂತಹ ಸ್ವಾತಂತ್ರ್ಯ ಪ್ರೇಮ, ನಿಸ್ವಾರ್ಥ ಸೇವೆ, ಹೋರಾಟದ ಕೆಚ್ಚೆದೆಗಳು ತುಂಬಿಕೊಂಡಿದ್ದವು ಎಂದು ಮನಗಾಣಲಾಗುತ್ತದೆ.'[೧೪]

ಅಡಿಟಿಪ್ಪಣಿಗಳು

೧. ಪಾಟೀಲ್ ಎಚ್.ಎಸ್. (ಸಂ) 'ವಿಮೋಚನೆ' - ೧೯೯೯, ಪುಟ ೪೦೯

೨. ಅದೇ, ಪುಟ ೪೧೧

೩. ಅದೇ, ಪುಟ ೮೫

೪. ಪಾಟೀಲ್ ಎಚ್.ಎಸ್. (ಸಂದರ್ಶನ ದಿ. ೧೮-೦೧-೨೦೦೪)

೫. ಧ್ರುವನಾರಾಯಣ (ಸಂ) 'ಸ್ವಾತಂತ್ರ್ಯಾಂದೋಳನ ರಾಯಚೂರು ಜಿಲ್ಲೆ', ಪುಟ ೧೧೩

೬. ರಾಮಣ್ಣ ಹವಳೆ (ಲೇ) 'ಸ್ವಾತಂತ್ರ್ಯ ಹೋರಾಟದಲ್ಲಿ ಗಜೇಂದ್ರಗಡ ಶಿಬಿರ', ೧೯೯೭, ಪುಟ ೨೦

೭. ಅದೇ, ಪುಟ ೨೨

೮. ಅದೇ, ಪುಟ ೨೪

೯. ಶ್ರೀ ವಿಜಯರಾವ್ ದೇಸಾಯಿ, 'ವಿಮೋಚನ ಹೋರಾಟಗಾರರು' (ಸಂದರ್ಶನ ದಿ. ೨೭-೦೨-೨೦೦೪)

೧೦. ಶ್ರೀ ಪುಂಡಲೀಕಪ್ಪ ಜ್ಞಾನಮೋಠ, 'ವಿಮೋಚನ ಹೋರಾಟಗಾರರು ಹಾಗೂ ಶಿಬಿರಾಧಿಪತಿಗಳು' (ಸಂದರ್ಶನ ದಿ. ೮-೦೩-೨೦೦೪)

೧೧. ಪಾಟೀಲ್.ಎಚ್.ಎಸ್. (ಸಂ) 'ವಿಮೋಚನೆ' - ೧೯೯೯, ಪುಟ ೪೦೫

೧೨. ಅದೇ, ಪುಟ ೪೦೮

೧೩. ರಾಮಣ್ಣ ಹವಳೆ - 'ಸ್ವಾತಂತ್ರ್ಯ ಹೋರಾಟದಲ್ಲಿ ಗಜೇಂದ್ರಗಡ ಶಿಬಿರ', ೧೯೯೭, ಪುಟ ೭೫

೧೪. ಸಿದ್ದಪ್ಪ - 'ವಿಮೋಚನ ಹೋರಾಟಗಾರರು ಮತ್ತು ಶಿಬಿರದ ನಾಯಕರು' (ಸಂದರ್ಶನ ೨೯-೦೧-೨೦೦೪)

ಅಧ್ಯಾಯ ೪

# ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದ ರೂವಾರಿಗಳು

೪.೧. ಅಳವಂಡಿ ಶಿವಮೂರ್ತಿಸ್ವಾಮಿಗಳು

೪.೨. ವೀರಭದ್ರಪ್ಪ ಶಿರೂರು

೪.೩. ಪುಂಡಲೀಕಪ್ಪ ಜ್ಞಾನಮೋತೆ

೪.೪. ಮುರಡಿ ಭೀಮಜ್ಜ

೪.೫. ಎಸ್.ಎಂ.ಬಂಗಾರಶೆಟ್ಟರ್

೪.೬. ಜಯತೀರ್ಥ ರಾಜಪುರೋಹಿತ

೪.೭. ಆರ್.ಎಂ.ಗಂಗಾವತಿ

೪.೮. ವಿಜಯರಾವ್ ದೇಸಾಯಿ

ಅಧ್ಯಾಯ ೪

# ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದ ರೂವಾರಿಗಳು

ಭಾರತವು ೧೯೪೭ ಆಗಸ್ಟ ೧೫ ರಂದು ಸ್ವಾತಂತ್ರ್ಯ ಪಡೆದು ಸಂಭ್ರಮದಲ್ಲಿದ್ದರೆ, ಹೈದರಾಬಾದ್ ಪ್ರಾಂತ್ಯದ ಪ್ರಜೆಗಳಿಗೆ ಈ ಸ್ವಾತಂತ್ರ್ಯದ ಕನಸು ನನಸಾಗಿ ಕಾರ್ಯರೂಪಗೊಂಡಿರಲ್ಲಿಲ್ಲ. ನಿಜಾಂನು ತಾನೇ ಸರ್ವಾಧಿಕಾರಿಯೆಂದು ಹೈದರಾಬಾದ್ ಪ್ರಾಂತ್ಯವನ್ನು ಆಳುತ್ತಿದ್ದನು. ಭಾರತದ ಒಕ್ಕೂಟಕ್ಕೆ ಸೇರಿಸದೆ ಸ್ವತಂತ್ರ ಸಂಸ್ಥಾನವೆಂದು ಘೋಷಿಸಿಕೊಂಡನು. 'ಈ ಘೋಷಣೆಯು ಹೈದರಾಬಾದ್ ಕರ್ನಾಟಕದ ಜನತೆಗೆ ಭಯವನ್ನು ಹುಟ್ಟಿಸಿತು. ಭಾರತದ ಒಕ್ಕೂಟ ವ್ಯವಸ್ಥೆಗೆ ಹೈದರಾಬಾದ್ ಸಂಸ್ಥಾನವು ಸವಾಲಾಗಿ ಪರಿಣಮಿಸಿತು.'[೧] ಹೈದರಾಬಾದ್ ಕರ್ನಾಟಕದ ಭಾಗಗಳಲ್ಲಿ ಅದರಲ್ಲೂ ಕೊಪ್ಪಳ ಜಿಲ್ಲೆಯಲ್ಲಿ ಮೊಟ್ಟ ಮೊದಲು ನಿಜಾಂ ಹಾಗೂ ರಜಾಕಾರರ ವಿರುದ್ಧ ಹೋರಾಟ ಆರಂಭವಾಯಿತು. ರಜಾಕಾರರ ದಬ್ಬಾಳಿಕೆಯ ಕ್ರೂರ ನೀತಿಯನ್ನು ಇಲ್ಲಿನ ಜನ ಒಪ್ಪು ತ್ತಿರಲಿಲ್ಲ. ಅಷ್ಟೇ ಅಲ್ಲದೆ ಅವರ ದುರಾಡಳಿತವನ್ನು ಖಂಡಿಸಲು ಜನತೆ ಹೆದರುತ್ತಿದ್ದರು. ಏಕೆಂದರೆ ಅವರ ವಿರುದ್ಧವಾಗಿ ನಿಲ್ಲುವ ಸಾಮರ್ಥ್ಯ ಇವರಲಿರಲಿಲ್ಲ. ಆದರೂ ಇಲ್ಲಿನ ನಾಯಕರು ಬ್ರಿಟಿಷರ ಹಾಗೂ ನಿಜಾಂರ ಆಳ್ವಿಕೆಯನ್ನು ಈಮೊದಲೇ ವಿರೋಧಿಸಿದ್ದರು. ಹೈದರಾಬಾದ್ ಪ್ರಾಂತ್ಯದ ಜನತೆಯು ಯಾವುದೇ ಜವಾಬು ನೀಡದೆ ನಿಜಾಂನ ಕೆಲಸ ಮಾಡಬೇಕಿತ್ತೇ ವಿನಃ ಯಾವ ತೊಂದರೆ ಅನುಭವಿಸಲು ಸಿದ್ಧವಿರಲಿಲ್ಲ. ಹೈದರಾಬಾದ್ ಪ್ರಾಂತ್ಯದ ಈ ಭಾಗಗಳಲ್ಲಿ ಜನಸಾಮಾನ್ಯರನ್ನು ಮುಕ್ತವಾಗಿರಲು ಬಿಡುತ್ತಿರಲಿಲ್ಲ. ಇಲ್ಲಿ ಏನೇ ಕಾರ್ಯಗಳನ್ನು ಮಾಡಬೇಕಾದರು ನಿಜಾಂನ ಒಪ್ಪಿಗೆಯೇ ಅವಶ್ಯವಾಗಿತ್ತು. ಇಂತಹ ಸಂದಿಗ್ಧದ ಪರಿಸ್ಥಿತಿಯಲ್ಲಿ ಹೈದರಾಬಾದ್ ಕರ್ನಾಟಕದ ಜನತೆಯ ಜೀವನ ಸಾಗಿಸಬೇಕಾಗಿತ್ತು. ಹೀಗೆ ಎಲ್ಲಿ ನೋಡಿದರಲ್ಲಿ ದಬ್ಬಾಳಿಕೆ, ಅತ್ಯಾಚಾರಗಳನ್ನು ಕಂಡ ಅನೇಕ ಹಿರಿಯ ಸ್ವಾತಂತ್ರ್ಯ ಪ್ರೇಮಿಗಳು ಒಂದೆಡೆ ಸೇರಿಕೊಂಡು, ನಿಜಾಂ ಹಾಗೂ ರಜಾಕಾರರ ವಿರುದ್ಧ ಹೋರಾಟವನ್ನು ಕುರಿತು ಚರ್ಚಿಸಿದರು. ನಂತರ ಮುಖಂಡರು. ಶಿಬಿರಗಳ ಮೂಲಕ ಗುಪ್ತವಾಗಿ ಹೋರಾಟಕ್ಕೆ ಅಣಿಯಾದರು. ಈ ಹೋರಾಟವು ಸಾರ್ವತ್ರಿಕವಾಯಿತು. ಈ ವಿಮೋಚನ ಹೋರಾಟಕ್ಕೆ ಸಾಮಾನ್ಯರನ್ನು ಪಾಲ್ಗೊಳ್ಳುವಂತೆ ಪ್ರೇರಿಪಿಸಿದರು. ತನ್ಮೂಲಕ ಶಿಬಿರಗಳನ್ನು ಸ್ಥಾಪಿಸುವುದರ ಜೊತೆಗೆ ಗುಪ್ತ ಸಭೆಗಳನ್ನು ನಡೆಸಿ ಹೋರಾಟ ಕುರಿತು ಚಿಂತನೆ ಮಾಡಲು ಪ್ರಾರಂಭಿಸಿದರು.

ಹೀಗೆ ಹೋರಾಟಗಾರರ ಸಮೂಹವು ಒಂದೇ ಕಡೆ ಸೇರಲು ಆರಂಭವಾಯಿತು. ನೂರಾರು ಕಾರ್ಯಕರ್ತರು ಸ್ವಯಂಪ್ರೇರಣೆಯಿಂದ ಈ ಹೋರಾಟಕ್ಕೆ ಧುಮುಕಿದರು. ಅಲ್ಲದೇ ಅಸಂಖ್ಯಾತ ವಿದ್ಯಾರ್ಥಿಗಳು ತಮ್ಮ ಶಾಲೆ, ಕಾಲೇಜುಗಳಿಗೆ ಶರಣುಹೊಡೆದು ಹೆಚ್ಚಿನ ಸಂಖ್ಯೆಯಲ್ಲಿ ತಮ್ಮ ನಾಡಿನ ಮುಕ್ತಿಗಾಗಿ ಹೋರಾಟಕ್ಕೆ ಮುಂದೆ ಬಂದರು. ಅದರಲ್ಲಿ ಕೊಪ್ಪಳ ಜಿಲ್ಲೆಯಲ್ಲಿ ಸಾಮಾನ್ಯ ಜನತೆಯ ಸಾಂಘಿಕ ಬೆಂಬಲಗಳು ಹೋರಾಟ ವನ್ನು ಇನ್ನಷ್ಟು ತೀವ್ರವಾಗಲು ಪ್ರೇರೆಪಿಸಿದವು. ಅದರಲ್ಲಿ ಪ್ರಮುಖವಾಗಿ ಶ್ರೀ ಶಿವಮೂರ್ತಿಸ್ವಾಮಿ ಅಳವಂಡಿ, ವೀರಭದ್ರಪ್ಪ ಶಿರೂರು, ಮುರುಡಿ ಭೀಮಜ್ಜ, ಪುಂಡಲೀಕಪ್ಪ ಜ್ಞಾನಮೋಠೆ, ಜಯತೀರ್ಥ ರಾಜಪುರೋಹಿತ, ಡಾ.ಸಿ.ಎಂ.ಚುರ್ಚಿಹಾಳಮಠ, ವೀರುಪಾಕ್ಷಯ್ಯ, ಎಸ್.ಎಂ.ಬಂಗಾರಶೆಟ್ಟರ್ ಮುಂತಾದವರು ಈ ಭಾಗದ ಸ್ವಾತಂತ್ರ್ಯ ಹೋರಾಟಕ್ಕಾಗಿ, ಹೈದರಾಬಾದ್ ಕರ್ನಾಟಕದ ವಿಮೋಚನಗೆ ತಮ್ಮ ಪ್ರಾಣದ ಹಂಗನ್ನು ತೊರೆದು ಹೋರಾಡಲು ಮುಂದಾದರು. ಇವರೆಲ್ಲಾ ಕೊಪ್ಪಳ ಜಿಲ್ಲೆಯವರೇ ಆಗಿದ್ದು, ಕೆಲವರು ಇಂದಿಗೂ ಜೀವಂತ ವಾಗಿದ್ದು, ಅಂದಿನ ನೈಜ ಸ್ಥಿತಿಯನ್ನು ತಿಳಿಸಲು ತುಂಬಾ ಉತ್ಸುಕತೆಯಿಂದ ಮುಂದಾಗುತ್ತಾರೆ. ಈ ಹೋರಾಟ ಗಾರರ ಒಂದೊಂದು ರಾಷ್ಟ್ರಪ್ರೇಮದ ಮಾತುಗಳು ರಾಷ್ಟ್ರಭಕ್ತಿಯನ್ನು ಮೂಡಿಸುವಲ್ಲಿ ಹೆಚ್ಚು ಸಹಾಯಕಾರಿ ಯಾಗಿವೆ. ಭಾರತ ಸ್ವಾತಂತ್ರ್ಯ ಹೋರಾಟದಲ್ಲಿ ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟವು ಐತಿಹಾಸಿಕವಾದ ನೆಲೆಯನ್ನು ಹೊಂದಿದೆ. ವಿಮೋಚನ ಹೋರಾಟಗಾರರ ಚಾರಿತ್ರಿಕ ನೆಲೆಯಲ್ಲಿ ಅವರ ವ್ಯಕ್ತಿತ್ವದ ಮೂಲಕ ಸಾಧನೆ, ಹೋರಾಟಗಳನ್ನು ದಾಖಲಿಸಲು ಇಲ್ಲಿ ಪ್ರಯತ್ನಪಡಲಾಗಿದೆ. ಆ ನಿಟ್ಟಿನಲ್ಲಿ ಇದೊಂದು ಸಣ್ಣ ಪ್ರಯತ್ನವಾಗಿದೆ.

## ೪.೧. ಅಳವಂಡಿ ಶಿವಮೂರ್ತಿಸ್ವಾಮಿಗಳು

ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದ ಹೋರಾಟಗಾರರಲ್ಲಿ ಮುಂಚೂಣಿಯಲ್ಲಿರುವವರ ಪೈಕಿ ಶ್ರೀ ಅಳವಂಡಿ ಶಿವಮೂರ್ತಿಸ್ವಾಮಿಗಳು ಒಬ್ಬರಾಗಿದ್ದಾರೆ. ಮುಂಡರಗಿ ಶಿಬಿರದ ಮೂಲಕ ತಮ್ಮ ಹೋರಾಟಕ್ಕೆ ನಾಂದಿ ಹಾಡಿದ ಶಿವಮೂರ್ತಿಸ್ವಾಮಿಯವರು, ಕೊಪ್ಪಳ ಜಿಲ್ಲೆಯ ಜನತೆಗೆ ಆಶಾಕಿರಣವಾಗಿ ವಿಮೋಚನ ಹೋರಾಟದಲ್ಲಿ ಅಪೂರ್ವ ಸಾಧನೆಗೈದಿದ್ದಾರೆ. ಇಡೀ ಕೊಪ್ಪಳ ಜಿಲ್ಲೆಯ ಎಲ್ಲಾ ಶಿಬಿರಗಳಿಗೆ ಕಮಾಂಡರ್ ಆಗಿ ಅವರು ಕಾರ್ಯನಿರ್ವಹಿಸಿದ್ದಾರೆ.

ಶ್ರೀ ಅಳವಂಡಿ ಶಿವಮೂರ್ತಿಯವರು ಜೂನ್ ೨೮, ೧೯೨೨ ರಂದು ಕೊಪ್ಪಳ ತಾಲೂಕಿನ ಅಳವಂಡಿ ಎಂಬ ಗ್ರಾಮದಲ್ಲಿ ಜನಿಸಿದರು. ಪ್ರಾಥಮಿಕ ವಿದ್ಯಾಭ್ಯಾಸವನ್ನು ಅಳವಂಡಿ ಹಾಗೂ ಅಬ್ಬಿಗೇರಿಯಲ್ಲಿ ಮುಗಿಸಿ ಕೊಂಡು, ಕೊಪ್ಪಳದ ಉರ್ದು ಪ್ರಾಥಮಿಕ ಶಾಲೆಯಲ್ಲಿ ಒಂದು ವರ್ಷದವರೆಗೆ ಉರ್ದುಭಾಷೆಯನ್ನು ಅಧ್ಯಯನ ಮಾಡಿದರು. ಗುಲಬರ್ಗಾದಲ್ಲಿ ಹೈಸ್ಕೂಲ್ ಓದುತ್ತಿದ್ದಾಗಲೇ ಇವರು ವಿದ್ಯಾರ್ಥಿಗಳ ನಾಯಕರಾಗಿ ಆಗಿನ ನಿಜಾಂ ಸರಕಾರದ ವಿರುದ್ಧ ಧ್ವನಿ ಎತ್ತಿದ್ದರು. ನಂತರ ಬಿ.ಎಸ್ಸಿ. ಪದವಿಯನ್ನು ಹೈದರಾಬಾದಿನ ಉಸ್ಮಾನಿಯಾ

ವಿಶ್ವವಿದ್ಯಾಲಯದಲ್ಲಿ ಅಧ್ಯಯನ ಸಂದರ್ಭದಲ್ಲಿಯೆ, ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದಲ್ಲಿ ಧುಮುಕಿದರು. ನಿಜಾಂನ ಕೆಂಗಣ್ಣಿಗೆ ಗುರಿಯಾಗಿ ಪದವಿ ಮುಗಿಸದೆ ಭೂಗತ ಹೋರಾಟಕ್ಕೆ ಮುಂದಾದರು.

ಹಂತ ಹಂತವಾಗಿ ನಿಜಾಂನ ವಿರುದ್ಧ ಭೂಗತವಾಗಿ ಹೋರಾಟಗಳನ್ನು ಸಂಘಟಿಸುತ್ತಾ ನಡೆದರು. ಮುಂಡರಗಿಯಲ್ಲಿ ಸತ್ಯಾಗ್ರಹ ಶಿಬಿರ ಸ್ಥಾಪಿಸಿ ನಂತರ ಪೊಲೀಸ್ ಕಾರ್ಯಚರಣೆಯವರೆಗೆ ಶಿಬಿರದ ಪ್ರಮುಖರಾಗಿ ಕೆಲಸ ಮಾಡಿದರು. ನಿಜಾಂ ರಾಜ್ಯದಿಂದ ಬರುತ್ತಿದ್ದ ನೂರಾರು ನಿರಾಶ್ರಿತರಿಗೆ ದಾಸೋಹದ ವ್ಯವಸ್ಥೆಯನ್ನು ಕೈಗೊಂಡರು. ಇವರಿಗೆ ಪ್ರತಿಯೊಂದು ಕಾರ್ಯದಲ್ಲಿ ಬಸರಿಗಿಡದ ವೀರಪ್ಪ, ಅಂದಾನಪ್ಪ ದೊಡ್ಡಮೇಟಿ, ಸಾಹುಕಾರ ಶಿದ್ನೆಕೊಪ್ಪ ದೇಸಾಯಿಯವರು ಅಪಾರ ಸಹಾಯ, ಸಹಕಾರವನ್ನು ನೀಡಿದರು.

ಇವರು ಮುಂಡರಗಿ ಶಿಬಿರಾಧಿಪತಿಯಾಗಿ ತಮ್ಮ ನಾಯಕತ್ವದಲ್ಲಿ ಕುಕನೂರು ಪೊಲೀಸ್ ಠಾಣೆಯ ಮೇಲೆ ದಾಳಿ ಮಾಡಿದರು. ಠಾಣೆಯಲ್ಲಿ ದಾಖಲೆಗಳನ್ನು ನಾಶಮಾಡಿ, ಶಸ್ತ್ರಾಸ್ತ್ರಗಳನ್ನು ವಶಪಡಿಸಿಕೊಂಡರು.[೨] ಹೈದರಾಬಾದ್ ಸರಕಾರ ವಿಧಿಸಿದ 'ಲೇವಿ ವಸೂಲಿ' ಹಾಗೂ ಹಳ್ಳಿಗಳ ಮೇಲೆ ನಡೆಯುತ್ತಿರುವ ದಬ್ಬಾಳಿಕೆಗಳನ್ನು ವಿರೋಧಿಸಿ ಜೈಲುಕಂಡರು.

೧೯೪೩-೪೫ರಲ್ಲಿ ಸ್ವದೇಶಿ ಚಳುವಳಿಯ ಅಂಗವಾಗಿ ಶ್ರೀ ಶಿವಮೂರ್ತಿಸ್ವಾಮಿಗಳು ತಮ್ಮ ಮಿತ್ರರೊಂದಿಗೆ ಚರ್ಚಿಸಿ ಈ ಭಾಗದಲ್ಲಿ ಸ್ವದೇಶಿ ಮಂತ್ರದ ಮಹತ್ವವನ್ನು ತಿಳಿಸಿದರು. ವಿದೇಶಿ ಗಿರಣಿಗಳಿಂದ ತಯಾರು ಮಾಡಿದ ಬಟ್ಟೆಗಳನ್ನು ಸುಟ್ಟುಹಾಕಿ ಅಳವಂಡಿಯಲ್ಲಿ 'ಖಾದಿ ಚರಕ ಸಂಘ'ವನ್ನು ಸ್ಥಾಪಿಸಿ, ಜನರನ್ನು ಸ್ವದೇಶಿ ನೀತಿಯೆಡೆಗೆ ತರಲು ಪ್ರಯತ್ನಿಸಿದರು. ಕೊಪ್ಪಳ ಜಿಲ್ಲೆಯಲ್ಲಿ ಮೊದಲ ಬಾರಿಗೆ ಸಾಮಾಜಿಕ ಸಂಘಟನೆಯಲ್ಲಿ ತೊಡಗಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಶಿರೂರು ವೀರಭದ್ರಪ್ಪನವರ ನೇತೃತ್ವದಲ್ಲಿ ಕೊಪ್ಪಳ ಭಾಗದಲ್ಲಿ ರೈತ ಸಂಘಟನೆಯನ್ನು ಸ್ಥಾಪನೆಮಾಡಿದರು. ರೈತರ ತೊಂದರೆಗಳನ್ನು ನಿಜಾಂ ಸರಕಾರಕ್ಕೆ ತಿಳಿಸುವದರ ಮೂಲಕ ರೈತರ ಜೊತೆಗೆ ಹೈದರಾಬಾದಿಗೆ  ಒಂದು ನಿಯೋಗವನ್ನು ಕರೆದುಕೊಂಡು ಹೋಗಿ, ನಿಜಾಂನಿಗೆ ಮನವರಿಕೆ ಮಾಡಿದರು. ಅದರಂತೆ ೧೯೪೮-೪೯ ರಲ್ಲಿ ಕೊಪ್ಪಳ ಜಿಲ್ಲೆಯು ಬರಗಾಲಕ್ಕೆ ತುತ್ತಾದ ಸಂದರ್ಭದಲ್ಲಿ ಭೂಕಂದಾಯ ಸಂಗ್ರಹಣೆಯ ವಿರುದ್ಧ ಪ್ರತಿಭಟನೆ ಮಾಡಿ, ರೈತರ ಜನಪರ ಹೋರಾಟಕ್ಕೆ ಚಾಲನೆ ನೀಡಿದರು. ಜೊತೆಗೆ ಹೈದರಾಬಾದ್ ಕರ್ನಾಟಕದ ವಿಮೋಚನೆಯ ಕಿಚ್ಚನ್ನು ಸಾಮಾನ್ಯ ಜನರಲ್ಲಿ ತುಂಬಿಸಿದರು. ತಮ್ಮ ಸಿದ್ದೇಶ್ವರ ಮಠದಲ್ಲಿಯೇ ಖಾದಿ ಪ್ರಚಾರ ಸಂಘಟನೆಗಳನ್ನು, ರೈತರ ಸಮೂಹಗಳನ್ನು, ನಿಜಾಂನ ವಿರುದ್ಧವಾಗಿ ರೂಪರೇಷೆಗಳನ್ನು ಇಲ್ಲಿಯೇ ಸಾಮೂಹಿಕ ಚರ್ಚೆಗಳನ್ನು ಪ್ರಾರಂಭಿಸಿದರು. ರಜಾಕಾರರು ಹಾಗೂ ಪಠಾಣರು ಸೇರಿ ಇವರ ಮಠವನ್ನೇ ಲೂಟಿ ಮಾಡಿದ್ದು ಮುಂಡರಗಿ ಶಿಬಿರದ ಕಾರ್ಯಕರ್ತರ ಹೋರಾಟದ ಕಿಡಿಗೆ ನಾಂದಿಯಾಯಿತು.

ಅದರಂತೆ ಶಿಕ್ಷಣದಿಂದಲೇ ಸಾಮಾಜಿಕ ಪರಿವರ್ತನೆಯು ಸಾಧ್ಯವೆಂದು ತಿಳಿದು, ಕೊಪ್ಪಳ ತಾಲೂಕಿನ ಅಳವಂಡಿ ಗ್ರಾಮದಲ್ಲಿ 'ಕರ್ನಾಟಕ ವಿದ್ಯಾಲಯ ಹಿರಿಯ ಪ್ರಾಥಮಿಕ ಶಾಲೆ'ಯೊಂದನ್ನು ಸ್ಥಾಪಿಸಿದರು. ಕರಿಸಿದ್ದ ಸ್ವಾಮಿಗಳ ಸತತ ಪ್ರಯತ್ನದ ನೆರವಿನಿಂದ ಅನೇಕ ಧಾರ್ಮಿಕ ಸೇವೆಗಳನ್ನು ಗುಡಿ ನಿರ್ಮಾಣಗಳಿಂದ ಪ್ರಾರಂಭಿಸಿದರು.[೩]

ಹೀಗೆ ಶ್ರೀ ಶಿವಮೂರ್ತಿಸ್ವಾಮಿ ಅಳವಂಡಿಯವರು ಭಾರತ ಸ್ವಾತಂತ್ರ್ಯ ಚಳುವಳಿಯ ಜೊತೆಗೆ ಹೈದರಾಬಾದ್ ಕರ್ನಾಟಕ ವಿಮೋಚನಾ ಹೋರಾಟಕ್ಕೆ ಮುಂಡರಗಿ ಗಡಿಶಿಬಿರದ ನಾಯಕತ್ವವನ್ನು ವಹಿಸಿ, ಹೈದರಾಬಾದ್ ಸಂಸ್ಥಾನದ ನಿಜಾಂನ ವಿರುದ್ಧ ಹಾಗೂ ರಜಾಕಾರರ ದುಷ್ಕೃತ್ಯಗಳನ್ನು ಮಟ್ಟಹಾಕುವುದರ ಮೂಲಕ ಇಡೀ ಕೊಪ್ಪಳ ಜಹಗೀರು ಜಿಲ್ಲೆಯಲ್ಲಿ ಸಂಚರಿಸಿ ಶಿಬಿರಗಳ ಮಾರ್ಗದರ್ಶಕರಾಗಿ ನಿಜಾಂನ ಕಪಿ ಮುಷ್ಠಿಯಿಂದ ಬಿಡುಗಡೆಗೊಳಿಸಲು ಇವರು ಮಾಡಿದ ಧೈರ್ಯ, ಸಾಹಸದಿಂದ ಕೂಡಿದ ಹೋರಾಟಗಳು ಸ್ಮರಣೀಯ ವಾಗಿವೆ.[೪] ಈಗಲೂ ನಮ್ಮ ಮುಂದೆ ಇರುವ ಶ್ರೀ ಶಿವಮೂರ್ತಿ ಸ್ವಾಮಿಯವರು ೧೯೫೨ ರಲ್ಲಿ ಲೋಕಸಭಾ ಸದಸ್ಯರಾಗಿ ರಾಷ್ಟ್ರರಾಜಕಾರಣದಲ್ಲಿ ಮುಖ್ಯ ಹುದ್ದೆಗಳಲ್ಲಿ ಕಾರ್ಯನಿರ್ವಹಿಸಿ ಅಪೂರ್ವವಾದ ಕೆಲಸ ಮಾಡಿದ ಕೀರ್ತಿ ಇವರಿಗೆ ಸಲ್ಲುತ್ತದೆ. ಅಂದಿನ ವಿಮೋಚನ ಹೋರಾಟದ ನೆನಪುಗಳನ್ನು ಇವರು ಹೇಳುವ ಮಾತಿನಲ್ಲಿ ಕೇಳುತ್ತಿದ್ದರೆ ಸಹಜವಾಗಿ ಯುವಕರಲ್ಲಿ ರಾಷ್ಟ್ರೀಯತೆಯ ಕಿಚ್ಚು ಸೃಷ್ಠಿಯಾಗುವುದರಲ್ಲಿ ಅನುಮಾನವಿಲ್ಲ.

## ೪.೨. ವೀರಭದ್ರಪ್ಪ ಶಿರೂರು

೧೯೪೦ರಲ್ಲಿ ಬೀದರ ನಗರದಲ್ಲಿ 'ನಿಜಾಂ ಕರ್ನಾಟಕ ಪರಿಷತ್'ಗೆ ಕೊಪ್ಪಳ ಜಿಲ್ಲೆಯಿಂದ ೨೦ ಜನ ಕಾರ್ಯಕರ್ತರನ್ನು ಇವರು ಸಂಘಟಿಸಿಕೊಂಡು ಹೋಗಿದ್ದರು. ನಿಜಾಮನು ಆಗ ಘೋಷಿಸಿದ್ದ ಸುಧಾರಣೆಗಳನ್ನು ವಿರೋಧಿಸಿ ಅಲ್ಲಿ ಭಾಷಣ ಮಾಡಿ ಜವಾಬ್ದಾರಿ ಸರ್ಕಾರಕ್ಕಾಗಿ ಚಳವಳಿಯನ್ನು ನಡೆಸಿದರು. ನಂತರ ಹೈದರಾಬಾದ್‌ನಲ್ಲಿ ನಡೆದ ಸ್ಟೇಟ್ ಕಾಂಗ್ರೆಸ್ಸಿನ ಸಮ್ಮೇಳನಕ್ಕೆ ಕೊಪ್ಪಳ ಭಾಗದಿಂದ ೧೦-೧೨ ಜನ ಸಂಘಟನೆ ಮಾಡಿ 'ಪ್ರಜಾಸಮಿತಿ' ಎಂಬ ಸಂಘವನ್ನು ಸ್ಥಾಪಿಸಿಕೊಂಡರು.[೫] ನಂತರ ಜನಪರ ಸರ್ಕಾರದ ಹೋರಾಟದ ಜೊತೆಗೆ ಈ ಭಾಗದ ರಾಜೂರು, ಕುಕನೂರು, ಕೊಪ್ಪಳದಲ್ಲಿ ಹರಿಜನ ಬಾಲಕರಿಗಾಗಿ ಒಂದು ಶಾಲೆಯನ್ನು ಸ್ಥಾಪಿಸಿದರು.

೧೯೪೭ ಅಗಸ್ಟ್ ೧೫ ಎಲ್ಲೆಡೆ ರಾಷ್ಟ್ರಧ್ವಜ ಹಾರಿಸಿ, ನಿಜಾಂ ಸರ್ಕಾರದ ಕ್ರಮಗಳನ್ನು ಪ್ರತಿಭಟಿಸಲು ತಿರ್ಮಾನ ತೆಗೆದುಕೊಂಡು ಅನೇಕ ಕಡೆ ಕಾರ್ಯಕರ್ತರನ್ನು ಹುರಿದುಂಬಿಸಿ ಸತ್ಯಾಗ್ರಹದ ಸಿದ್ಧತೆ ಮಾಡಿಸಲು, ಆಗಸ್ಟ್ ೧೫ ರಂದು ಕಿನ್ನಾಳ, ಅಳವಂಡಿ, ಕಾತರಕಿ, ಕವಲೂರು, ಕುಕನೂರು, ಯಲಬುರ್ಗಾ, ಸಂಗನಹಾಳು

ಚಿಕ್ಕೇನಕೊಪ್ಪ ಇಲ್ಲೆಲ್ಲಾ ಸತ್ಯಾಗ್ರಹಗಳನ್ನು ಕೈಗೊಂಡರು. ಕೊಪ್ಪಳದಲ್ಲಿ ಲಕ್ಷ್ಮಣಾಚಾರ್ಯ ವಕೀಲ, ಹಂಪಿ ಮಾಸ್ತರರೊಡನೆ ಧ್ವಜ ಹಾರಿಸಿದ ಘಟನೆಯಲ್ಲಿ ಬಂಧಿತರಾಗಿ ಜೈಲು ಕಂಡರು.

ಒಬ್ಬ ಮನುಷ್ಯನು, ತನ್ನ ಹುಟ್ಟಿಗನುಗುಣವಾಗಿ ಅನೇಕ ಸವಾಲುಗಳನ್ನು ಜವಾಬ್ದಾರಿಗಳನ್ನು ಎದುರಿಸ ಬೇಕಾಗುತ್ತದೆ . ಈ ಸವಾಲುಗಳೂ ಜವಾಬ್ದಾರಿಗಳೂ ಅವನ ಕೌಟುಂಬಿಕ ಸ್ಥಾನಮಾನ, ಹುಟ್ಟಿದ ಅಥವಾ ವಾಸಿಸಿದ ಪರಿಸಿರ, ಅವನು ಜೀವಿಸದ ಕಾಲಖಂಡ ಇವುಗಳಿಗೆ ಅವಲಂಬಿಸಿ, ವ್ಯತ್ಯಾಸವಾಗುತ್ತಿರ ಬಹುದು. ಒಬ್ಬ ರಾಜಪುತ್ರನಿಗಿರುವ ಜವಬ್ದಾರಿಯು ಒಬ್ಬ ಕೂಲಿಕಾರನಿಗಿರುವ ಜವಬ್ದಾರಿಯೂ ಬೇರೆ ಬೇರೆ. ಅದರಂತೆ ದಿಲ್ಲಿಯಲ್ಲಿರುವವನ ಹಾಗು ಹಳ್ಳಿಯಲ್ಲಿರುವವನ ಪರಿಸರಗಳಲ್ಲಿ ಸಾಕಷ್ಟು ವ್ಯತ್ಯಾಸವಿದೆ.

ಭಾರತದಲ್ಲೇ ತೀರ ಹಿಂದುಳಿದ ಪ್ರದೇಶಗಳಲ್ಲಿ ಒಂದಾದ ಹೈದರಾಬಾದ್ ಸಂಸ್ಥಾನದ ತೀರ ಹಿಂದುಳಿದ ಕುಗ್ರಾಮವೊಂದರಲ್ಲಿ ಅವಿದ್ಯಾವಂತ ರೈತಕುಟಂಬದಲ್ಲಿ ಸ್ವಾತಂತ್ರ್ಯ ಪೂರ್ವದಲ್ಲಿ ಜನಿಸಿದ ದಿವಂಗತ ವೀರಭದ್ರಪ್ಪ ಶಿರೂರು ಅವರು ತಾನು ಬದುಕಿದ ಪರಿಸರ, ತಾನು ಜೀವಿಸಿದ್ದ ಕಾಲಖಂಡ ಹಾಗೂ ತನಗಿದ್ದ ಇತಿಮಿತಿಗಳಿಗೂ ಮೀರಿ ವಿವಿಧ ಕ್ಷೇತ್ರಗಳಲ್ಲಿದ್ದ ಕೊರತೆಗಳನ್ನು ನಿವಾರಿಸಲು ಶ್ರಮಿಸಿ ಶೂನ್ಯದ ನಿರ್ವಾತ ಪ್ರದೇಶದಲ್ಲಿ ಅಸ್ತಿತ್ವದ ಪ್ರಾಣವಾಯುವನ್ನು ತುಂಬಿ ತಮ್ಮ ಘನತೆಯನ್ನು ಮೆರೆದವರು.

**ರಾಷ್ಟ್ರೀಯ ಭಾವನೆ**

ಕರ್ನಾಟಕದಲ್ಲಿ ಅಂದು ರಾಷ್ಟ್ರೀಯ ಚಟುವಟಿಕೆಗಳು ಭರದಿಂದ ಸಾಗಿದ್ದವು. ರಾಷ್ಟ್ರೀಯ ಶಾಲೆಯಲ್ಲಿದ್ದ ರಿಂದ ವೀರಭದ್ರಪ್ಪನವರಲ್ಲಿ ತಮಗರಿವಿಲ್ಲದಂತೆ ರಾಷ್ಟ್ರೀಯತೆ ಜಾಗೃತೆ ವಹಿಸಿತು. ಶಾಲೆಯಲ್ಲಿನ ತಮ್ಮ ಇರುವಿನ ಬಗ್ಗೆ ವೀರಭದ್ರಪ್ಪನವರು ಹೀಗೆ ಹೇಳಿದ್ದಾರೆ. 'ಈ ಸತ್ಸಂಗದಿಂದ ನನ್ನ ದುಶ್ಚಟಗಳು ಮಾಯವಾದವು. ನಮ್ಮ ಮಾಸ್ತರರು ದಿನಾಲು ಕೆಲವು ವೇಳೆ ಉತ್ತಮ ನಡವಳಿಕೆ ಕುರಿತು ಬೋಧನೆ ಮಾಡುತ್ತಿದ್ದರು. ನನ್ನಲ್ಲಿ ರಾಷ್ಟ್ರೀಯ ಭಾವನೆ ಬೆಳೆದು ಬರಲು ಆ ಶಾಲೆಯ ಆ ನಮ್ಮ ರಾಘವೇಂದ್ರರಾವ್ ಮಾಸ್ತರರು ಮುಖ್ಯ ಕಾರಣವೆಂದು ನನಗೆ ಇಂದಿನಿಂದ ತಿಳಿಯಿತು'[೬] ಎಂದು ತಮ್ಮ ಆತ್ಮಚರಿತ್ರೆಯಲ್ಲಿ ಹೀಗೆ ಹೇಳುವುದನ್ನು ಗಮನಿಸಿದಾಗ ಅವರು ಸ್ವಾತಂತ್ರ್ಯ ಹೋರಾಟ ಹಾಗು ಈ ಹೈದರಾಬಾದ್ ಕರ್ನಾಟಕದ ವಿಮೋಚನ ಹೋರಾಟ ದಲ್ಲಿ ಯಾವ ರೀತಿ ತೊಡಗಿಸಿಕೊಂಡಿದ್ದರು ಎಂದು ಹೇಳಬಹುದು.

ಇಷ್ಟೇ ಅಲ್ಲದೆ ಶಿರೂರ ವೀರಭದ್ರಪ್ಪನವರು ಅನೇಕ ಧಾರ್ಮಿಕ ಮಹಾಸಭೆಗಳಲ್ಲಿ ಭಾಗವಹಿಸಿದ್ದರು. ೧೯೪೨ರಲ್ಲಿ ಧಾರವಾಡದಲ್ಲಿ ಜಾತಿ-ಬೇಧಗಳ ನಿವಾರಣೆಗಾಗಿ ನಡೆದ ಧಾರ್ಮಿಕ ಮಹಾಸಭೆಯಲ್ಲಿ ಉಪನ್ಯಾಸಗಳನ್ನು ಮಾಡಿದ ಹರ್ಡೇಕರ ಮಂಜಪ್ಪನವರ ಪರಿಚಯ ಇವರಿಗಾಯಿತು. ಈ ಪರಿಚಯವು ಮುಂದೆ ವಿಮೋಚನ ಹೋರಾಟಕ್ಕೆ ಸ್ಫೂರ್ತಿ ನೀಡುವುದರಲ್ಲಿ ನೆರವಾಯಿತು.

## ಹರಿಜನ ಸೇವೆ

೧೯೩೪ ರಲ್ಲಿ ಗಾಂಧೀಜಿಯವರು ಅಸ್ಪೃಶ್ಯತಾ ನಿವರಣೆಗಾಗಿ 'ಹರಿಜನ ಪ್ರವಾಸ' ಕೈಗೊಂಡಿದ್ದರು. ಗದುಗಿಗೆ ಬಳ್ಳಾರಿ ಕಡೆಯಿಂದ ರೈಲಿನಲ್ಲಿ ಹೊರಟಿರುವ ಸುದ್ದಿಯನ್ನು ತಿಳಿದ ವೀರಭದ್ರಪ್ಪನವರು ಕೊಪ್ಪಳ ಜಿಲ್ಲೆಯ ಭಾನಾಪುರ ಸ್ಟೇಶನ್ನಿನಲ್ಲಿ ರೈಲು ೧೦ ನಿಮಿಷ ನಿಲ್ಲುವುದಿತ್ತು. ಅಂದು ವೀರಭದ್ರಪ್ಪನವರು ತಮ್ಮನಗೌಡ ಪಾಟೀಲ್, ಎಚ್.ಕೊಟ್ರಪ್ಪ ನಂತರ ಮುಂಖಂಡರ ಜೊತೆ ಭಾನಾಪುರದಲ್ಲಿ ೧೦ ಸಾವಿರ ಜನರೆದುರು ಮಹಾತ್ಮ ಗಾಂಧೀಜಿಯವರಿಗೆ ನಿಧಿ ಹಾಗೂ ಮಾನಪತ್ರಗಳನ್ನು ಅರ್ಪಿಸಿದರು. ನಂತರ ಅದೇ ರೈಲು ಡಬ್ಬಿಯಲ್ಲಿ ಗದಗಿಗೆ ಪ್ರಮಾಣ ಮಾಡಿ ಅವರ ಕಾರ್ಯಕ್ರಮಗಳಲ್ಲಿ ಪಾಲ್ಗೊಂಡರು.

ಈ ಹಿನ್ನೆಲೆಯಲ್ಲಿ ವೀರಭದ್ರಪ್ಪನವರು ತಮ್ಮ ಪಕ್ಕದ ಊರಾದ ರಾಜೂರಿನಲ್ಲಿ ಹರಿಜನರಿಗಾಗಿಯೇ ಒಂದು ಶಾಲೆಯನ್ನು ತೆರೆದರು. ಹಾಗು ತಮ್ಮ ಸ್ವಂತ ಊರಾದ ಆಡೂರುನಲ್ಲಿ ರಾಷ್ಟ್ರೀಯ ಶಾಲೆಯನ್ನು ಸ್ಥಾಪಿಸಿ ಬಡಜನ ವಿದ್ಯಾರ್ಥಿಗಳ ಶಿಕ್ಷಣ ಪ್ರಗತಿಗಾಗಿ ದುಡಿದರು. ಈ ಮಧ್ಯೆ ಗ್ರಾಮದವರ ಅಸಮಾಧಾನ, ಪ್ರತಿರೋಧಗಳ ನಡುವೆ ತಮ್ಮ ಕಾರ್ಯ ನಿಲ್ಲಿಸಲಿಲ್ಲ. ಮಹಾತ್ಮ ಗಾಂಧೀಜಿಯವರ ಆದೇಶದಂತೆ ಹರಿಜನರ ಸೇವೆಗಾಗಿ ಶ್ರಮಿಸುತ್ತಾ ರಾಷ್ಟ್ರೀಯ ಹೋರಾಟಗಳಿಗೆ ಮುನ್ನುಗ್ಗಿದರು.

## ಸತ್ಯಾಗ್ರಹ ಹೋರಾಟ

ದೇಶ ಸ್ವಾತಂತ್ರ್ಯವಾದ ದಿನ ಹೈದರಾಬಾದ್ ನಿಜಾಂರು ತಾವು ಸ್ವತಂತ್ರರೆಂದು ಘೋಷಿಸಿ ಭಾರತದ ಒಕ್ಕೂಟದಲ್ಲಿ ಸೇರಲು ನಿರಾಕರಿಸಿದರು. ಆಗಸ್ಟ್ ೧೫, ೧೯೪೭ ರಂದು ವೀರಭದ್ರಪ್ಪನವರು ಹಾಗೂ ಇನ್ನಿಬ್ಬರು ಗೆಳೆಯರ ಜೊತೆ ಕೊಪ್ಪಳದಲ್ಲಿ ತ್ರಿವರ್ಣ ಧ್ವಜ ಹಾರಿಸಿ ಸತ್ಯಾಗ್ರಹ ಹೂಡಲು ನಿರ್ಧರಿಸಿದರು. ಅದಕ್ಕೂ ಮೊದಲು ಇದೆ ರೀತಿ ಬೇರೆ ಬೇರೆ ಕಡೆ ಅದೇ ದಿನ ಸತ್ಯಾಗ್ರಹಗಳು ನಡೆಯುವಂತೆ ವೀರಭದ್ರಪ್ಪನವರು ಕೊಪ್ಪಳ ಭಾಗದಲ್ಲಿ ಮೊದಲೇ ಓಡಾಡಿ ಏರ್ಪಾಡು ಮಾಡಿದ್ದರು. ಮನೆಬಿಟ್ಟು ಜೈಲಿಗೆ ಹೋಗುವದು ಸ್ವತಃ ವೀರಭದ್ರಪ್ಪನವರಿಗೆ ಸುಲಭದ ವಿಷಯವಾಗಿರಲಿಲ್ಲ. ಎಲ್ಲೆಡೆ ರಜಾಕಾರರ ಹಾವಳಿ, ಕಾಂಗ್ರೆಸ್‌ನವರ ಮನೆಗಳ ಮೇಲೆ ಅವರ ಕಣ್ಣು, ಮನೆಯಲ್ಲಿ ಅನೇಕ ತರದ ಕಷ್ಟಗಳಿದ್ದರೂ ಸಹನೆಯಿಂದ ನಿಭಾಯಿಸಿ ಕೇವಲ ಒಂದೇ ಹೊತ್ತು ಆಹಾರ ಸೇವಿಸುತ್ತಾ ತಮ್ಮ ಗೆಳೆಯರಾದ ಹಂಪಿ ಮಾಸ್ತರ, ವಕೀಲರಾದ ಲಕ್ಷ್ಮಣಾಚಾರ್ಯರ ಜೊತೆ ಧ್ವಜ ಹಾರಿಸಿ ಬಂಧನಕ್ಕೊಳಗಾಗಿ ಏಳು ತಿಂಗಳು ಜೈಲುವಾಸ ಅನುಭವಿಸಿದರು.[೬] ಜೈಲಿನ ಒಳಗಡೆ ಇದ್ದೆ ಅಲ್ಲಿ - ಇಲ್ಲಿ ಗಡಿಭಾಗಗಳಲ್ಲಿ ದೇಶಭಕ್ತ ತರುಣರು ಗುಂಪು ಕಟ್ಟಿ ಶಿಬಿರ ಸ್ಥಾಪಿಸಿ ಹೈದರಾಬಾದ್ ನಿಜಾಂನ ಸರಕಾರಕ್ಕೆ ಚಳ್ಳೇಹಣ್ಣು ತಿನಿಸುವ ಘಟನೆಯನ್ನು ಕೇಳುತ್ತಾ ಗುಪ್ತವಾಗಿ ಶಿಬಿರದ ನಾಯಕರು ಹಾಗೂ ಹೋರಾಟಗಾರರಿಗೆ ಸ್ಫೂರ್ತಿಯನ್ನು ತುಂಬುವ ಕೆಲಸ ಮಾಡುತ್ತಿದ್ದರು.

ನಂತರ ಅಳವಂಡಿ ಶಿವಮೂರ್ತಿಸ್ವಾಮಿಗಳ ನೇತೃತ್ವದಲ್ಲಿ ಮುಂಡರಗಿ ಶಿಬಿರದ ಮೂಲಕ ರಜಾಕಾರರ ದುಷ್ಕೃತ್ಯಗಳನ್ನು ತಡೆಯಲು ಅವಿರತ ಕಾರ್ಯಕ್ಕೈಗೊಂಡರು. ಧ್ವಜ ಹಾರಿಸಿದ ಘಟನೆಯ ಸಂಬಂಧವಾಗಿ ಮತ್ತೆ ಇವರನ್ನು ಹೈದರಾಬಾದನಿಂದ ಔರಂಗಬಾದ್ ಜೈಲಿಗೆ ಕಳುಹಿಸಿದರು. ಶಿಕ್ಷೆಯ ಅವಧಿಯು ೭ ತಿಂಗಳು ಮುಗಿದು ಪುನಃ ಮುಂಡರಗಿ ಬಳಿಯ ಬೆಳಗಟ್ಟಿಯಲ್ಲಿ ರಜಾಕಾರರಿಗೂಹಾಗೂ ಶಿಬಿರದ ಕಾರ್ಯಕರ್ತರಿಗೂ ಹೋರಾಟ ನಡೆಯಿತು. ಇವರ ಸಮಯೋಚಿತ ನೆರವಿನಿಂದ ಸುಮಾರು ೨೦೦ ಜನ ದಾಳಿಕೋರರು ಹೋರಾಟದಿಂದ ಕಾಲ್ತೆಗೆಯುವಂತೆ ಮಾಡಿದರು.

## ೪.೩. ಪುಂಡಲೀಕಪ್ಪ ಜ್ಞಾನಮೋಕೆ

ಎಲ್ಲರೂ ಅಂದುಕೊಂಡಂತೆ ಸ್ವಾತಂತ್ರ್ಯ ಪರ್ವವು ೧೯೪೭ ಆಗಸ್ಟ್ ೧೫ ಕ್ಕೆ ಪೂರ್ಣಗೊಳ್ಳಲಿಲ್ಲ. ಅದು ಹೈದರಾಬಾದ್ ಕರ್ನಾಟಕ ಪ್ರಾಂತ್ಯದಲ್ಲಿ ಮತ್ತು ಕಾಶ್ಮೀರದಲ್ಲಿ ಬೇರೆ ಬಗೆಯದಾಗಿತ್ತು. ನಿಜಾಂನ ವಿರುದ್ಧವಾಗಿ ಜವಬ್ದಾರಿ ಸರ್ಕಾರದ ಸ್ಥಾಪನೆ ಹಾಗೂ ವಿಮೋಚನೆಗಾಗಿ ಕೊಪ್ಪಳ ಜಿಲ್ಲೆಯಲ್ಲಿ ಶಿಬಿರಗಳು ಜನ್ಮ ತಾಳಿದವು. ಈ ಶಿಬಿರಗಳಲ್ಲಿ ಅತ್ಯಂತ ಹೋರಾಟಶೀಲ ನಿಯಮವನ್ನು ಸ್ವಾತಂತ್ರ್ಯ ಕನಸಿನ ಧ್ಯೇಯಗಳನ್ನು ಇಟ್ಟುಕೊಂಡ ಶಿಬಿರವೇ ಗಜೇಂದ್ರಗಡ ಶಿಬಿರ. ಈ ಶಿಬಿರದ ಶಿಬಿರಾಧಿಪತಿಯಾದ ಶ್ರೀ ಪುಂಡಲೀಕಪ್ಪ ಜ್ಞಾನಮೋಕೆಯವರು ರಜಾಕಾರ ದೌರ್ಜನ್ಯಗಳ ಹಾಗೂ ನಿಜಾಂನ ಅದಕ್ಷ ಆಡಳಿತದ ವಿರುದ್ಧವಾಗಿ ಹೋರಾಟ ಮಾಡಿದ ಮಹಾನ್ ವಿಮೋಚನ ಹೋರಾಟಗಾರ.

ಒಬ್ಬ ಬಡ ದರ್ಜಿಗ ಕುಟುಂಬದಲ್ಲಿ ಜನಿಸಿದ ಶ್ರೀ ಪುಂಡಲೀಕಪ್ಪನವರು, ಕಿತ್ತು ತಿನ್ನುವ ಬಡತನದ ನಡುವೆಯೇ ಪ್ರಾಥಮಿಕ ಶಿಕ್ಷಣವನ್ನು (೪ನೇ ತರಗತಿವರೆಗೆ) ಕುಷ್ಠಗಿಯಲ್ಲಿ ಮುಗಿಸಿದರು. ಮುಂದೆ ಪ್ರೌಢ ಶಿಕ್ಷಣವನ್ನು ಮನೆಯ ಪರಿಸ್ಥಿತಿಯ ಹಿನ್ನಲೆಯಿಂದ ಓದು ನಿಲ್ಲಿಸಿ, ತಮ್ಮ ವೃತ್ತಿಯಲ್ಲಿ ಮುಂದುವರೆಯಬೇಕಾದ ಪ್ರಸಂಗ ಒದಗಿ ಬಂದಿತು.

ನಂತರ ಗಾಂಧೀಜಿಯ ಬದುಕಿಗೆ ಆಕರ್ಷಿತರಾಗಿ ಸ್ವಾತಂತ್ರ್ಯ ಹೋರಾಟದಲ್ಲಿ ಧುಮುಕಲು ಸನ್ನದ್ಧರಾದರು. ಆ ಸಂದರ್ಭದಲ್ಲಿ ಹೈದರಾಬಾದ್ ಪ್ರಾಂತ್ಯಕ್ಕೆ ಒಳಪಟ್ಟು ನಿಜಾಂನ ಕಪಿಮುಷ್ಠಿಯಲ್ಲಿದ್ದ ಜಹಗೀರು ರೂಪದ ಕೊಪ್ಪಳ ಜಿಲ್ಲೆಯ ಜನತೆಯು ರಜಾಕಾರರ ದೌರ್ಜನ್ಯಗಳಿಂದ ರೋಸಿ ಹೋಗಿತ್ತು. ಆದ್ದರಿಂದಲೇ ಇವರು ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದಲ್ಲಿ ಅಣಿಯಾದರು. ಇವರ ಹೋರಾಟಕ್ಕೆ ಸ್ಫೂರ್ತಿ ನೀಡಿ ಹುರಿದುಂಬಿಸಿದವರೆಂದರೆ ಸ್ವಾತಂತ್ರ್ಯಪ್ರೇಮಿ ಸನ್ಯಾಸಿಯಾದ ಮುರುಡಿ ಭೀಮಜ್ಜನವರು. ಈ ಸಂದರ್ಭದಲ್ಲಿ ಗಜೇಂದ್ರಗಡ ಶಿಬಿರದ ನಾಯಕತ್ವವನ್ನು ವಹಿಸಿದರು. ಇಲ್ಲಿಂದ ಅವರ ಹೋರಾಟದ ಕ್ಷಣಗಳು ಆರಂಭಗೊಂಡವು.

೧೯೪೧ ರಲ್ಲಿ ಭೀಕರ ಬರಗಾಲ ಬಿದ್ದಾಗ ಇಲ್ಲಿನ ಜನತೆಯ ಜೀವನವು ಶೋಚನೀಯ ಸ್ಥಿತಿಯಲ್ಲಿತ್ತು. ಇದನ್ನರಿತ ಪುಂಡಲೀಕಪ್ಪನವರು, ಕಡಿಮೆ ದರದಲ್ಲಿ ಜೋಳ ಖರೀದಿಸಿ ಬಡಜನರಿಗೆ ಹಂಚಲು ಮುಂದಾದರು. ೧೯೪೨ ಗಾಂಧೀಜಿ ಕರೆಯ ಸ್ವದೇಶಿ ಆಂದೋಲನದಲ್ಲಿ ಭಾಗವಹಿಸಿ ಭಾರತದ ಸ್ವಾತಂತ್ರ್ಯ ಹೋರಾಟದಲ್ಲೂ ಧುಮುಕಿದರು.[೮]

ಇದರಿಂದ ಕ್ರೋಧಗೊಂಡು ಹಲವಾರು ಸ್ವಾತಂತ್ರ್ಯ ಹೋರಾಟಗಾರರಲ್ಲಿ ಶ್ರೀ ಪುಂಡಲೀಕಪ್ಪನವರು ಮುಂಚೂಣಿಯಲ್ಲಿ ನಿಜಾಂ ಸರ್ಕಾರದ ವಿರುದ್ಧ ಚಳವಳಿ ಹೂಡಲು ಮುಂದಾದರು. ಮುಂದೆ 'ವಂದೇ ಮಾತರಂ' ಚಳವಳಿಯಲ್ಲಿ ಉಸ್ಮಾನಿಯಾ ವಿದ್ಯಾರ್ಥಿಗಳ ಕೂಗಿಗೆ ಸಂಪೂರ್ಣ ಸಹಕಾರ ನೀಡಿದರು. ಪ್ರಚಲಿತ ಪತ್ರಿಕೆಗಳ ಮೂಲಕ ಹೈದರಾಬಾದ್ ಪ್ರಾಂತ್ಯಗಳ ಪರಿಸ್ಥಿತಿಯನ್ನು ಗಮನದಲ್ಲಿರಿಸಿ ಕುಷ್ಟಗಿಗೆ ಬಂದು ನೆಲೆಸಿದರು. ಶ್ರೀ ಜಗನ್ನಾಥರಾವ್ ಚಂದ್ರಿಕ, ವೆಂಕಟ ರಂಗಾರೆಡ್ಡಿ, ಶ್ರೀ ಅಣ್ಣರಾವ್ ಗುಣಮುಖಿ ಹಾಗೂ ಇತರರ ಜೊತೆಗೂಡಿ ಹೋರಾಟದ ರೂಪುರೇಷಗಳನ್ನು ತಯಾರಿಸಲು ಪ್ರಾರಂಭಿಸಿದರು. ಅದರಂತೆ ಹೀರೇ ವಂಕಲಕುಂಟಿ ಗ್ರಾಮದ ಪೂರ್ಣಾವಧಿ ಕಾಂಗ್ರೆಸ್ ಕಾರ್ಯಕರ್ತರಾಗಿದ್ದುಕೊಂಡು ಜನಜಾಗ್ರತೆಗೊಳಿಸಿ ಸತ್ಯಾಗ್ರಹ ಸಂಘಟನೆಯಲ್ಲಿ ತೊಡಗಿದರು. ನಡೆಯುವ ಸಂತೆಯನ್ನು ಬಹಿಷ್ಕರಿಸಿ ನಿಜಾಂನಿಗೆ ಬರುವ ಕಂದಾಯವನ್ನು ತಡೆಹಿಡಿಯಲು ಪ್ರಯತ್ನಿಸಿದರು. ಗಜೇಂದ್ರಗಡ ಶಿಬಿರದ ಸುತ್ತಲಿನ ಗ್ರಾಮಗಳಾದ ಮಾಲಗಿತ್ತಿ, ಪಟ್ಲಚಿಂತಿ, ಇಟಗಿ, ನೀರಲ ಕೊಪ್ಪ ಮುಂತಾದ ಗಡಿಭಾಗದ ಹಳ್ಳಿಗಳಿಗೆ ಭೇಟಿ ನೀಡಿ ಜನರನ್ನು ನಿಜಾಂನ ವಿರುದ್ಧ ಸಂಘಟಿಸಲು ಹಾಗೂ ಅವರ ಹೋರಾಟಕ್ಕೆ ಸ್ಫೂರ್ತಿನೀಡಲು ತೀವ್ರವಾಗಿ ಪ್ರಯತ್ನಿಸಿದರು. ಇವರ ಶಿಬಿರಾಧಿಪತಿಯಾಗಿ ರಜಾಕಾರರ ಹಾಗು ಕೆಲವು ಪಟ್ಟಭದ್ರ ಹಿತಾಸಕ್ತಿಗಳ ವಿರುದ್ಧವಾಗಿ ಸಶಸ್ತ್ರ ದಾಳಿಯಲ್ಲಿ ನಾಯಕತ್ವವಹಿಸಿ ಯಲಬುರ್ಗಿ ತಹಶೀಲ ಕಛೇರಿ ಮೇಲೆ ಮಾಡಿದ ದಾಳಿಯು ನಿಜಾಂನನ್ನು ಭಯ ಹುಟ್ಟಿಸುವಲ್ಲಿ ಸಫಲವಾಯಿತು. ಅದೇರೀತಿಯಾಗಿ ಶಿಬಿರದ ಕಾರ್ಯಕರ್ತರ ಜೊತೆಗೂಡಿ ಹಿರೇವಂಕಲಕುಂಟ, ಮುಧೋಳ, ಕರಮುಡಿ, ಸಂಕನೂರು ಸಂಘರ್ಷದಲ್ಲಿ ಹೋರಾಟದ ನಾಯಕತ್ವ ವಹಿಸಿ ಸಶಸ್ತ್ರ ಹೋರಾಟವನ್ನು ಮಾಡಿದ್ದು ಅವರ ಧೈರ್ಯ ಹಾಗೂ ಅಪ್ಪಟ ರಾಷ್ಟ್ರಪ್ರೇಮವನ್ನು ಎತ್ತಿತೋರಿಸುತ್ತದೆ. ಹೀಗೆ ಅವರು ಹೈದರಾಬಾದ್ ಕರ್ನಾಟಕದ ವಿಮೋಚನೆಗಾಗಿ ಕೊಪ್ಪಳ ಜಿಲ್ಲೆಯ ಸಾಮಾನ್ಯ ಜನರನ್ನು ರಜಾಕಾರರ ದುಷ್ಕೃತ್ಯ ಗಳಿಂದ ರಕ್ಷಿಸಲು ಇವರು ಮಾಡಿದ ಹೋರಾಟ ಸ್ಮರಣೀಯ.

## ೪.೪. ಮುರುಡಿ ಭೀಮಜ್ಜ

'ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟ'ದಲ್ಲಿಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲೂಕಿನ ಪಾತ್ರವು ಅಮೋಘವಾದದ್ದಾಗಿದೆ. ಮುರುಡಿ ಗ್ರಾಮದಲ್ಲಿ ಪ್ರತಿಭಟನೆ, ಸಂಘಟನೆ, ಹಾಗೂ ಸತ್ಯಾಗ್ರಹದ ಮೂಲಕ ನಿಜಾಮರು, ರಜಾಕರರಲ್ಲಿ ನಡುಕು ಹುಟ್ಟಿಸಿದವರೇ ಮುರುಡಿ ಭೀಮಜ್ಜನೆಂಬ ಅಪ್ಪಟ ವಿಮೋಚನ

ಹೋರಾಟಗಾರ. ಇವರು ೧೭-೭-೧೯೧೫ರಲ್ಲಿ ಯಲಬುರ್ಗಾ ತಾಲೂಕಿನ ತಳಕಲ್ ಗ್ರಾಮದಲ್ಲಿ ಜನಿಸಿದರು. ಇವರು ತಮ್ಮ ತಾಯಿಯ ಊರಾದ ಮುರುಡಿ ಗ್ರಾಮಕ್ಕೆ ಬಂದು ನೆಲೆಸಿದರು. ಇವರ ಮೊದಲ ಹೆಸರು ಭೀಮಸೇನರಾಯ. ಇವರು ಹೈದರಾಬಾದಿನಲ್ಲಿ ಉಸ್ಮಾನಿಯಾ ವಿಶ್ವವಿದ್ಯಾಲಯದಲ್ಲಿ ಓದುತ್ತಿದ್ದ ಸಂದರ್ಭದಲ್ಲಿ ಮೊದಲು 'ವಂದೇ ಮಾತರಂ' ಚಳುವಳಿಯ ಮೂಲಕ ದೇಶದ ಸ್ವಾತಂತ್ರ್ಯ ದೀಕ್ಷೆಯನ್ನು ಪಡೆದರು. ೧೯೪೨ ರ ಚಲೇಜಾವ್ ಚಳುವಳಿಯ ಸಮಯದಲ್ಲಿ ಸತ್ಯಾಗ್ರಹ ಮಾಡಿ, ಬೆಳಗಾವಿಯ ಹಿಂಡಲಗಾ ಜೈಲಿನಲ್ಲಿ ಜೈಲುವಾಸ ಅನುಭವಿಸಿ, ನಂತರ ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದಲ್ಲಿ ಸಕ್ರಿಯವಾದ ಪಾತ್ರವನ್ನು ವಹಿಸಿದರು. ಕುಷ್ಟಗಿಯಲ್ಲಿ ನಡೆದ ಅಶ್ಪೃಶ್ಯತಾ ವಿರುದ್ದ ಜನರನ್ನು ಎಚ್ಚರಿಸುವುದರ ಮೂಲಕ ದೀನದಲಿತರಿಗೆ ಸಹಾಯ ಮಾಡಿ ಸಮಾಜದ ಕೆಂಗಣ್ಣಿಗೆ ಗುರಿಯಾದರು.

ಗಜೇಂದ್ರಗಡ ಶಿಬಿರವನ್ನು ಸ್ಥಾಪಿಸುವದರಲ್ಲಿ ಮಹತ್ತರ ಪಾತ್ರವಹಿಸಿದ ಭೀಮಜ್ಜನವರು, ನಿಜಾಂನ ರಜಾಕಾರ ವಿರುದ್ಧ ಕಾರ್ಯಕರ್ತರನ್ನು ಸೃಷ್ಟಿಸಿದ ಕೀರ್ತಿ ಇವರದ್ದಾಗಿದೆ. ಇವರ ಪಟ್ಟಾ ಶಿಷ್ಯನಾದ ಪುಂಡಲೀಕಪ್ಪನವರನ್ನು ಗಜೇಂದ್ರಗಡ ಶಿಭಿರಾಧಿಪತಿಯನ್ನಾಗಿ ನೇಮಕ ಮಾಡಿ ಅದಕ್ಕೆ ಸಲಹೆ, ಸಹಕಾರ, ಹುರಿದುಂಬಿಸುವ ಕೆಲಸಗಳನ್ನು ಮಾಡಿದರು. ಇವರ ಗುರುಗಳಾದ ಶ್ರೀ ವೆಂಕೋಬರಾಯರಿಂದ ಸನ್ಯಾಸತ್ವ ಸ್ವೀಕರಿಸಿ, ಸಾಮಾನ್ಯ ಜನತೆಯ ಪರವಾಗಿ ತಮ್ಮ ಜೀವಮಾನವಿಡಿ ಹೋರಾಡಿದರು. ಮಾಲಗಿತ್ತಿ, ಹನುಮನಾಳ, ಇಲಕಲ್, ಗಜೇಂದ್ರಗಡ ಶಿಬಿರಗಳಿಗೆ ಇವರೇ ಮೂಲ ಗುರುಗಳಾಗಿ ಕಾರ್ಯನಿರ್ವಹಿಸಿದರು. ನಂತರ ೧೯೪೭ ಅಕ್ಟೋಬರ್‌ನಲ್ಲಿ 'ಆನಂದ ಟ್ರಸ್ಟ'ನ್ನು ಸ್ಥಾಪಿಸಿ ಶಿಕ್ಷಣ ಸಂಸ್ಥೆಗಳನ್ನು ಪ್ರಾರಂಭಿಸಿದರು. ಕುಷ್ಠಗಿಯಲ್ಲಿ ಆಯುರ್ವೇದಿಕ್ ಕಾಲೇಜ್‌ನ್ನು ಪ್ರಾರಂಭಿಸಿದರು. ತದನಂತರ ಮುರುಡಿಯಲ್ಲಿ ಒಂದು ಆಶ್ರಮವನ್ನು ತೆರೆದು ಬಡ ಹಾಗೂ ನಿರಾಶ್ರಿತರಿಗೆ ಸಹಾಯ ಮಾಡುವುದರ ಮೂಲಕ ಅವರಲ್ಲಿ ಸ್ವಾತಂತ್ರ್ಯದ ಚಿತ್ರಣವನ್ನು, ರಾಷ್ಟ್ರೀಯತೆಯ ವಿಚಾರಗಳನ್ನು ತುಂಬುವ ಕೆಲಸವನ್ನು ಮಾಡಿದರು. ಗಜೇಂದ್ರಗಡ ಶಿಬಿರದ ಮೂಲಕ ಮುಧೋಳ, ಕರಮುಡಿ, ಮಾಲಗಿತ್ತಿಯಲ್ಲಿರುವ ರಜಾಕಾರರರ ಸ್ಥಳಗಳ ಮೇಲೆ ದಾಳಿ ಮಾಡಲು ಸಲಹೆ, ಸಹಕಾರಗಳನ್ನು ನೀಡಿದರು. ಇವರು ಎಷ್ಟು ಸ್ವಾಭಿಮಾನ, ನಿಷ್ಠುರ ವಾದಗಳನ್ನು ಹೊಂದಿದ್ದರೆಂದರೆ ಒಂದು ಸಲ ಮುರುಡಿ ಗ್ರಾಮದ ತಮ್ಮ ಆಶ್ರಮದಲ್ಲಿ ತಾವು ಕಾರ್ಯನಿರತರಾದ ಸಂದರ್ಭದಲ್ಲಿ ತಮ್ಮ ಆಶ್ರಮ ವಾಸಿಯಾದ ಮಲ್ಲಪ್ಪ ಹಳ್ಳದನನ್ನು ಪೊಲೀಸರು ಬಂದು ಕೊಲೆ ಕೇಸಿನ ಆರೋಪದಲ್ಲಿ ಬಂಧನ ಮಾಡಿ ಜೈಲಿಗೆ ಕರೆದುಕೊಂಡು ಹೋದಾಗ, ಅದರ ಸತ್ಯತೆ ತಿಳಿದಿದ್ದರೂ ನೊಂದು ಸುಮಾರು ೧೫ ದಿನಗಳ ಕಾಲ ಹಿಮಾಲಯಕ್ಕೆ ಹೋಗಿ, ನಂತರ ಮಲ್ಲಪ್ಪನು ನಿರಪರಾಧಿಯೆಂದು ಸಾಬೀತಾದ ಮೇಲೆ ಮರಳಿ ಕೊಪ್ಪಳಕ್ಕೆ ಆಗಮಿಸಿದರು. ಗಜೇಂದ್ರಗಡ ಶಿಬಿರಕ್ಕೆ ಬಂದು ಗಜೇಂದ್ರಗಡದ ಕಾಲಕಾಲಕೇಶ್ವರ ಗವಿಯಲ್ಲಿ ಮೌನಿಯಾಗಿ ಕಾಲಕಳೆದರು.[೧೦]

ಮೌನ ತಪಸ್ವಿಯಾಗಿ ಇಡೀ ಕೊಪ್ಪಳ ಜಿಲ್ಲೆಯ ಶಿಬಿರಗಳಿಗೆ ತೆರಳಿ ಅಲ್ಲಿನ ಕಾರ್ಯ ಕರ್ತರಿಗೆ ಸ್ವಾತಂತ್ರ್ಯ ಹೋರಾಟದ ಬಗ್ಗೆ ಉಪನ್ಯಾಸಗಳನ್ನು ನೀಡುತ್ತಾ, ಶಿಬಿರಕ್ಕೆ ಬಂದ ನಿರಾಶ್ರಿತರಿಗೆ ಅನ್ನ, ವಸ್ತ್ರಗಳ ಸಹಾಯ ಮಾಡುತ್ತಾ ರಾಷ್ಟ್ರೀಯತೆಯ ವಿಚಾರಗಳಿಗನುಗುಣವಾಗಿ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸುವುದರ ಮೂಲಕ ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದಲ್ಲಿ ಮುರುಡಿ ಭೀಮಜ್ಜನವರ ಹೆಸರು ಚಿರಸ್ಮರಣೀಯವಾಗಿದೆ.

## ೪.೫. ಎಸ್.ಎಂ.ಬಂಗಾರಶೆಟ್ಟರ್

ಹೈದರಾಬಾದ್ ಕರ್ನಾಟಕ ವಿಮೋಚನಾ ಚಳುವಳಿಯಲ್ಲಿ ಹಾಗು ಭಾರತ ಸ್ವಾತಂತ್ರ್ಯಕ್ಕಾಗಿ ಹೋರಾಡಿದವರಲ್ಲಿ ಶ್ರೀ ಶಂಕರಪ್ಪ ಬಂಗಾರಶೆಟ್ಟರ್ ಒಬ್ಬರು. ೧೯೪೭ ಅಗಸ್ಟ್ ೧೫ ರಂದು ಪ್ರಥಮಬಾರಿಗೆ ಕೊಪ್ಪಳದಲ್ಲಿ ಧ್ವಜ ಹಾರಿಸಿ ಸುಮಾರು ೮ ತಿಂಗಳು ಕಾಲ ಹೈದರಾಬಾದ್‌ನಲ್ಲಿ ಜೈಲುವಾಸವನ್ನು ಅನುಭವಿಸಿ, ನಂತರ ಮುಂಡರಗಿ ಶಿಬಿರದ ಮೂಲಕ ತಮ್ಮ ಹೋರಾಟವನ್ನು ಪ್ರಾರಂಭಿಸಿದ ಬಂಗಾರಶೆಟ್ಟರ್‌ರವರು ಕೊಪ್ಪಳದಲ್ಲಿ ವಂದೇ ಮಾತರಂ ಚಳುವಳಿಯಲ್ಲಿ ಭಾಗವಹಿಸಿ ವಿದ್ಯಾರ್ಥಿ ದೆಸೆಯಿದ್ದಾಗಲೆ ನಿಜಾಂನ ವಿರುದ್ಧ ಸಿಡಿದೆದ್ದು ಹೈಸ್ಕೂಲ್‌ಗೆ ವಿದಾಯ ಹೇಳಿ ವಿಮೋಚನ ಹೋರಾಟದಲ್ಲಿ ಧುಮುಕಿ ಜಿಲ್ಲೆಯ ಹಳ್ಳಿಹಳ್ಳಿಗೂ ಸಂಚರಿಸಿ ರಜಾಕಾರರ ವಿರುದ್ಧ ಸಾಮಾನ್ಯ ಜನರಲ್ಲಿ ಸ್ವಾತಂತ್ರ್ಯದ ಅರಿವನ್ನು ತುಂಬುವ ಕೆಲಸವನ್ನು ಮಾಡಿದರು. ಕೊಪ್ಪಳದಲ್ಲಿ ಧ್ವಜ ಹಾರಿಸುವ ಸಮಯದಲ್ಲಿ ೧೯೪೭ ಆಗಸ್ಟ್ ೧೫ ರಂದು 'ಜೈ ಹಿಂದ್-ಜೈ ಭಾರತ್ ಮಾತೆ' ಎಂದು ಕೂಗುತ್ತಿದ್ದುದನ್ನು ನೋಡಿ ನಿಜಾಂ ಪೊಲೀಸರು ಶಿರೂರು ವೀರಭದ್ರಪ್ಪ, ಜನಾರ್ಧನರಾವ್ ದೇಸಾಯಿ, ಹಂಪೀಕರ್ ಮುಂತಾದವರ ಜೊತೆ ಇವರನ್ನು ಬಂಧಿಸಿದರು.

ಕೊಪ್ಪಳದಲ್ಲಿ ನಡೆದ 'ವಂದೇ ಮಾತರಂ' ಚಳವಳಿಯಲ್ಲಿ ಬಂಗಾರಶೆಟ್ಟರ್‌ರವರ ಪಾತ್ರ ಹಿರಿದಾಗಿದೆ. ಸೋದರ ಮಾವನವರು ಆದ ಅಗಡಿ ಸಂಗಣ್ಣನವರ ಸ್ಫೂರ್ತಿ, ಸಹಕಾರದಿಂದ ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದಲ್ಲಿ ಧುಮುಕಿದರು. ಇವರು ಮುಂಡರಗಿ ಶಿಬಿರದ ಮೂಲಕ ಅನೇಕ ಭೂಗತ ಕಾರ್ಯಗಳಲ್ಲಿ ತೊಡಗಿದರು. ಕವಲೂರು, ಬೆಳಗಟ್ಟಿ, ಘಟನೆಗಳಲ್ಲಿ ಬಂಗಾರಶೆಟ್ಟರ್‌ರವರ ಪಾತ್ರವು ಮಹತ್ವದ್ದಾಗಿದೆ.



ಮುಂಡರಗಿ ಶಿಬಿರದ ಶಿಭಿರಾಧಿಪತಿಗಳಾಗಿದ್ದ ಶ್ರೀ ಶಿವಮೂರ್ತಿಸ್ವಾಮಿ ಅಳವಂಡಿಯವರ ಮಾರ್ಗದರ್ಶನ ಮುಖೇನ ಬೆಳಗಟ್ಟಿಯಲ್ಲಿ ನಡೆದ ರಜಾಕಾರರು ಹಾಗೂ ಶಿಬಿರದ ಕಾರ್ಯಕರ್ತರ ಹೋರಾಟದಲ್ಲಿ ಶಿಬಿರಕ್ಕೆ ಹಾಗೂ ನಾಯಕರಿಗೆ ಹೋರಾಟದ ವಿವರಗಳನ್ನು ನೀಡಿದರು. ಮುಂದೆ ಶ್ರೀ ಶಿರೂರು ವೀರಭದ್ರಪ್ಪನವರ ಜೊತೆಗೆ ಅಲ್ಲಿನ ಜನರಿಗೆ ಪರಿಹಾರ ಕಾರ್ಯದಲ್ಲಿ ತೊಡಗಿ ಅಲ್ಲಿನ ನಿರಾಶ್ರಿತರಿಗೆ ಉಪಚಾರ ಮಾಡುವುದರಲ್ಲಿ ತೊಡಗಿದರು.

ಅದರಂತೆ ಯಲಬುರ್ಗಾ ತಾಲೂಕಿನ ಮಂಗಳೂರು ಗ್ರಾಮದಲ್ಲಿ ರಜಾಕಾರರು ಹಾಗೂ ಪಠಾಣರು, ಭೂ ಕಂದಾಯ ವಸೂಲು ಮಾಡುವ ಸಂದರ್ಭದಲ್ಲಿ ಗ್ರಾಮದ ಕೃಷ್ಣಪ್ಪ ಇತರರು ಇವರನ್ನು ಹಿಡಿದು ಬಂಗಾರಶೆಟ್ಟರಿಗೆ ಒಪ್ಪಿಸಿದರು. ನಂತರ ಇವರು ಇವರನ್ನು ಪೊಲೀಸ್ ಠಾಣೆಗೆ ಒಪ್ಪಿಸಿ ಸಾಮಾನ್ಯ ಜನತೆಯಲ್ಲಿ ರಜಾಕಾರರ ದುಷ್ಕೃತ್ಯಗಳ ವಿರುದ್ಧ ಧ್ವನಿ ಎತ್ತುವಂತೆ ಮಾಡಿದ್ದು ಇವರಲ್ಲಿರುವ ಧೈರ್ಯ, ಸಾಹಸವನ್ನು ತೋರಿಸುತ್ತದೆ. ಧ್ವಜ ಹಾರಿಸುವ ಕಾರ್ಯಕ್ರಮಗಳಲ್ಲಿ ಮುಂಚೂಣಿಯಲ್ಲಿ ಇರುತ್ತಿದ್ದ ಇವರು ಇದೇ ಕಾರಣಕ್ಕೆ ಅನೇಕ ಬಾರಿ ಜೈಲು ಸೇರಿದ್ದನ್ನು ಇಲ್ಲಿ ಸ್ಮರಿಸಬಹುದು. ಮನೆಯಲ್ಲಿ ಕುಳಿತು ಅನೇಕ ಪತ್ರಿಕೆಗಳಲ್ಲಿ ಸ್ವಾತಂತ್ರ್ಯ ಕುರಿತು ಹಾಗೂ ನಿಜಾಂನ ವಿರುದ್ಧ ಲೇಖನಗಳನ್ನು ಬರೆದು ಜನರಲ್ಲಿ ರಾಷ್ಟ್ರೀಯತೆಯ ಪ್ರಭಾವವನ್ನು ತಿಳಿಸುವದರ ಮೂಲಕ ನಿಜಾಂ ಪೋಲಿಸರಿಗೆ ತಲೆನೋವಾಗಿ ಪರಿಣಮಿಸಿದ್ದರು. ಇವರ ಹೋರಾಟವನ್ನು ನಾವು ಹೆಚ್ಚಾಗಿ ಪತ್ರಿಕೆಯ ಮುಖಾಂತರ ನೋಡಬಹುದು. ಅಂದಿನ ಹೋರಾಟದ ರೋಮಾಂಚನಕಾರಿ ತುಣುಕು ಗಳನ್ನು ನಮ್ಮೆದುರಿಗೆ ಹೇಳುವ ಅವರ ಮಾತಿನಲ್ಲಿ ಇಂದಿಗೂ ನಾವು ನಮ್ಮ ರಾಷ್ಟ್ರದ ಸಮಗ್ರತೆಗೆ ದುಡಿಯಲೇ ಬೇಕು, ದೇಶದ ಸಾರ್ವಭೌಮತ್ವಕ್ಕೆ ದುಡಿಯಬೇಕು. ಎಂದು ಹೇಳುವ ಅವರ ಪತ್ರಿಕಾ ಲೇಖನಗಳನ್ನು ಗಮನಿಸಿದಾಗ ಅವರಲ್ಲಿರುವ ಹೋರಾಟಶೀಲ ಮನೋಭಾವನೆಯನ್ನು ಕಾಣಬಹುದಾಗಿದೆ.

## ೪.೬. ಜಯತೀರ್ಥ ರಾಜಪುರೋಹಿತ

ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದಲ್ಲಿ ಕೊಪ್ಪಳ ಜಿಲ್ಲೆಯ ಕನಕಗಿರಿ ಗ್ರಾಮದ ಜಯತೀರ್ಥ ರಾಜಪುರೋಹಿತರ ಹೆಸರು ಸ್ಮರಣೀಯವಾಗಿದೆ. ಇವರು ರಾಯಚೂರು , ಹೈದರಾಬಾದ್‌ಗಳಲ್ಲಿ ಅಧ್ಯಯನ ಮಾಡಿ "ವಂದೇ ಮಾತರಂ" ಚಳುವಳಿಯಲ್ಲಿ ಭಾಗವಹಿಸಿದ್ದಾರೆ. ಗಂಗಾವತಿ ತಾಲೂಕಿನಲ್ಲಿ ನಿಜಾಂ ಹಾಗೂ ರಜಾಕಾರರ ವಿರುದ್ಧ ಜನರನ್ನು ಸಂಘಟಿಸುತ್ತಾ, ಹೋರಾಡಲು ಪ್ರೇರಿಪಿಸಿದ್ದಾರೆ. ಕಂಪ್ಲಿ ಹಾಗೂ ಶಿರಗುಪ್ಪ ಶಿಬಿರದ ಕಾರ್ಯಕರ್ತರಿಗೆ ಸಹಾಯವನ್ನು ಮಾಡುತ್ತಾ ತಮ್ಮ ಹರಿತವಾದ ಲೇಖನಗಳ ಮೂಲಕ ಜನರಲ್ಲಿ ಸ್ವಾತಂತ್ರ್ಯ ಪ್ರೇಮವನ್ನು ತುಂಬಿಸಿದ್ದಾರೆ.

ಕೊಪ್ಪಳ ಜಿಲ್ಲೆಯ ಕನಕಗಿರಿಯಲ್ಲಿ ವಾಚನಾಲಯವನ್ನು ಸ್ಥಾಪಿಸಿ, ಇಲ್ಲಿಯ ಜನತೆಗೆ ಮಾಧ್ಯಮಗಳನ್ನು ಪರಿಚಯ ಮಾಡಿಸಿದ್ದಾರೆ. ನಿಜಾಂ ಕರ್ನಾಟಕ ಪರಿಷತ್ ಸ್ಥಾಪಿಸಿ, ಅದರ ಕಾರ್ಯದರ್ಶಿಯಾಗಿ ಕೆಲಸ ಮಾಡಿದ್ದಾರೆ. ೧೯೪೭ ಆಗಸ್ಟ್ ೧೫ ರಂದು ಭಾರತ ಸ್ವಾತಂತ್ರ್ಯವಾದ ದಿನದಂದು ನಿಜಾಂನು ಹೈದರಾಬಾದ್ ಸ್ಥಾನದಲ್ಲಿ ಯಾವುದೇ ರೀತಿಯ 'ತ್ರಿವರ್ಣ ಧ್ವಜ'ವನ್ನು ಹಾರಿಸಬಾರದೆಂದು ಆಜ್ಞೆ ಹೊರಡಿಸಿದನು. ಈ ಆಜ್ಞೆಯನ್ನು ಧಿಕ್ಕರಿಸಿ ಧೈರ್ಯದಿಂದ ಕನಕಗಿರಿಯಲ್ಲಿ ಧ್ವಜ ಹಾರಿಸಿದ ಕೀರ್ತಿಯು ಜಯತೀರ್ಥ ರಾಜ ಪುರೋಹಿತರಿಗೆ ಸಲ್ಲುತ್ತದೆ. ಹೈದರಾಬಾದ್ ಕರ್ನಾಟಕದ ವಿಮೋಚನ ಹೋರಾಟದಲ್ಲಿ ಸಂದರ್ಭದಲ್ಲಿ ಇವರು ಪತ್ರಿಕೆಗಳಿಗೆ, ಲೇಖನಗಳನ್ನು ಬರೆಯುವದರ ಮೂಲಕ ಶಿಬಿರಾರ್ಥಿಗಳನ್ನು ಹುರಿದುಂಬಿಸುವ ಕೆಲಸ

ಮಾಡುತ್ತಿದ್ದರು. ಜಯತೀರ್ಥ ರಾಜ ಪುರೋಹಿತರು ತಮ್ಮ ಹೋರಾಟವನ್ನು ಲೇಖಿನ ಉಪನ್ಯಾಸಗಳ ಮೂಲಕ ಮಾಡಿದ್ದಾರೆ. ಹುಲಿಹೈದರ್, ಮಾದಿನಾಳ ಗ್ರಾಮಗಳಲ್ಲಿ ಅಡಗಿದ್ದ ರಜಾಕಾರರನ್ನು ತುಂಗಭದ್ರ ಶಿಬಿರದ ಕಾರ್ತಕರ್ತರೊಡನೆ ಸೇರಿಕೊಂಡು ಓಡಿಸಿದ್ದಾರೆ. ಗ್ರಾಮದಲ್ಲಿಯ ಒತ್ತಾಯ ಪೂರ್ವಕವಾದ ಕಂದಾಯ ವಸೂಲಿಯನ್ನು ಪ್ರತಿಭಟಿಸುವಲ್ಲಿ ಯಶಸ್ವಿಯಾಗಿದ್ದಾರೆ. ಹೈದರಾಬಾದ್ ಕರ್ನಾಟಕ ಕೊಪ್ಪಳ ಜಿಲ್ಲೆಯ ವಿಮೋಚನ ಹೋರಾಟದಲ್ಲಿ ಜಯತೀರ್ಥ ರಾಜಪುರೋಹಿತರ ಹೋರಾಟ, ಸಾಧನೆಯು ಅಮೋಘವಾದ ದ್ದಾಗಿದೆ.

## ೪.೭. ಆರ್.ಎಂ.ಗಂಗಾವತಿ

ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದಲ್ಲಿ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲೂಕಿನ ಪಾತ್ರ ಗಮನಾರ್ಹವಾಗಿದೆ. ಗಂಗಾವತಿ ತಾಲೂಕಿನಲ್ಲಿ ನಿಜಾಂನ ವಿರುದ್ಧ ಸಂಘಟನೆಯನ್ನು ಮಾಡಿ ಜನತೆಯಲ್ಲಿ ದೇಶ ಪ್ರೇಮವನ್ನು ತುಂಬುತ್ತಿದ್ದವರೇ ಆರ್.ಎಂ.ಗಂಗಾವತಿ ಎಂಬ ವಿಮೋಚನ ಹೋರಾಟಗಾರ. ಇವರು ವಿದ್ಯಾರ್ಥಿ ದೆಸೆಯಲಿದ್ದಾಗಲೇ 'ವಂದೇಮಾತರಂ' ಚಳುವಳಿಯಲ್ಲಿ ಧುಮುಕಿದರು. ಗಾಂಧೀಜಿಯ ಕರೆಗೆ ಓಗೊಟ್ಟು 'ಸ್ವದೇಶಿ ಆಂದೋಲ'ನವನ್ನು ಪ್ರಥಮವಾಗಿ ಕೈಗೊಂಡ ಕೀರ್ತಿ ಆರ್.ಎಂ.ಗಂಗಾವತಿ ಯವರಿಗೆ ಸಲ್ಲುತ್ತದೆ. ಗಂಗಾವತಿ ತಾಲೂಕಿನ ವಿಮೋಚನ ಹೋರಾಟಗಾರರ ಜೊತೆಗೂಡಿ, ವಿದೇಶಿ ಬಟ್ಟೆ ಬಹಿಷ್ಕಾರ, ಖಾದಿ ಪ್ರಚಾರಗಳನ್ನು ಹಮ್ಮಿಕೊಂಡರು. ವಕೀಲರಾದ ಶ್ರೀ ಖಂಡೆರಾವ್, ಅಕ್ಬರ್ ತಿರುಮಲರಾಯ, ಜೋಷಿರಾಮ ಭಟ್, ರಾಯಚೂರಿನ ಶಿವಯ್ಯ ಇವರ ಜೊತೆಗೂಡಿ ರಜಾಕಾರರ ದಬ್ಬಾಳಿಕೆಯನ್ನು ಖಂಡಿಸಿದರು. ಕಂಪ್ಲಿ ಶಿಬಿರದಲ್ಲಿ ಆರ್.ಎಂ.ಗಂಗಾವತಿಯವರ ಪಾತ್ರ ಸ್ಮರಣೀಯವಾಗಿದೆ. ಶಿಬಿರದ ಕಾರ್ಯಕರ್ತರಿಗೆ ಆಹಾರ ಸರಬರಾಜಿನಿಂದ ಹಿಡಿದು ಉಪನ್ಯಾಸದವರೆಗೂ ಕಾರ್ಯ ಮಾಡಿದ್ದಾರೆ. ಕಾರಟಗಿ ಯಲ್ಲಿ ನಡೆದ ರಜಾಕಾರರ ದಾಳಿಯನ್ನು ಖಂಡಿಸಿ, ಸತ್ಯಾಗ್ರಹ ಮಾಡಿ ಸೆರೆಮನೆ ಸೇರಿದರು. ಅದರಂತೆ ಕೇಶವರಾವ್‌ರವರ ನಾಯಕತ್ವದಲ್ಲಿ ಶಿರುಗುಪ್ಪ ಶಿಬಿರದ ಕಾರ್ಯಕರ್ತರ ಜೊತೆಗೂಡಿ ಕಂದಾಯ ವಸೂಲಿ ಮಡುವುದನ್ನು ಪ್ರತಿಭಟಿಸಿದರು. ದಿನಾಂಕ ೨೧.೯.೧೯೪೭ ರಂದು ಗಂಗಾವತಿಯಲ್ಲಿ ಉತ್ಸಾಹಿ ತರುಣರನ್ನು ಸಂಘಟಿಸಿ ನಿಜಾಂನ ಹಾಗು ರಜಾಕಾರರ ವಿರುದ್ಧ ಹೋರಾಡಲು ಪ್ರೇರೆಪಿಸಿದರು. ೧೯೪೭ ಆಗಸ್ಟ್ ೧೫ ರಂದು ಗಂಗಾವತಿಯಲ್ಲಿ ಧ್ವಜಾರೋಹಣ ಮಾಡಿ, ನಿಜಾಂನ ಕೋಪಕ್ಕೆ ತುತ್ತಾಗಿ ಮತ್ತೊಮ್ಮೆ ಜೈಲು ಸೇರುವ ಪ್ರಸಂಗವು ಒದಗಿ ಬಂದಿತು. ತುಂಗಭದ್ರಾ, ಮುಂಡರಗಿ ಶಿಬಿರಗಳಿಗೆ ಭೇಟಿ ಕೊಟ್ಟು, ವಿಮೋಚನ ಹೋರಾಟ ವನ್ನು ಮತ್ತಷ್ಟು ತೀವ್ರಗೊಳಿಸಲು ನೆರವಾದರು. ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದ ಮುಂಚೂಣಿ ನಾಯಕರಲ್ಲಿ ಒಬ್ಬನಾದ ಆರ್.ಎಂ.ಗಂಗಾವತಿಯವರು ಒಬ್ಬ ನೇರ, ನಡೆ, ನುಡಿಯನ್ನು ಹೊಂದಿದ ವ್ಯಕ್ತಿತ್ವದವರಾಗಿದ್ದರು. ವಿಮೋಚನ ಹೋರಾಟದಲ್ಲಿ ಇವರ ಸಾಧನೆ ಮಹತ್ವಪೂರ್ಣವಾದುದು.

## ೪.೮. ವಿಜಯರಾವ್ ದೇಸಾಯಿ

ಗಜೇಂದ್ರಗಡ ಶಿಬಿರದ ಸ್ಥಾಪನೆಯಲ್ಲಿ ಮಹತ್ತರ ಪಾತ್ರವಹಿಸಿದ ಮತ್ತೊಬ್ಬ ವಿಮೋಚನ ಹೋರಾಟಗಾರರಾದ ವಿಜಯರಾವ್ ದೇಸಾಯಿರವರು, ಜಿಲ್ಲೆಯ ವಿಮೋಚನ ಹೋರಾಟದ ಪ್ರಮುಖರೂವಾರಿಯಾದ ಶ್ರೀ ಮುರುಡಿ ಭೀಮಜ್ಜನವರು ಸಹೋದರರಾಗಿದ್ದಾರೆ. ವಿಜಯರಾವ್ ದೇಸಾಯಿಯವರು ಗಜೇಂದ್ರಗಡ ಶಿಬಿರದಲ್ಲಿ ಪ್ರಮುಖ ಸಲಹೆಗಾರಗಾಗಿ ಕಾರ್ಯನಿರ್ವಹಿಸಿ ಅನೇಕ ದಾಳಿಗಳಲ್ಲಿ ಭಾಗವಹಿಸಿದ್ದಾರೆ. ವಿದ್ಯಾರ್ಥಿಯಿರುವಾಗಲೇ 'ವಂದೇ ಮಾತರಂ' ಚಳುವಳಿಗೆ ಧುಮುಕಿ, ಖಾದಿ ಪ್ರಚಾರ, ದೇಶಿಯ ಆಂದೋಲನಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದಾರೆ.

ಗಜೇಂದ್ರಗಡ ಶಿಬಿರದ ಕಾರ್ಯಚರಣೆಯಲ್ಲಿ ಪಾಲ್ಗೊಂಡು, ಹಿರೇವಂಕಲಕುಂಟಿ ಪೊಲೀಸ್ ಠಾಣೆ ಸುಡುವಲ್ಲಿ ಇವರು ಮಹತ್ತರ ಪಾತ್ರವನ್ನು ವಹಿಸಿದ್ದಾರೆ. ಡಾ.ಜಿ.ಎಸ್.ಮೇಲುಕೋಟೆ, ಶ್ರೀ ಜನಾರ್ಧನರಾವ್ ದೇಸಾಯಿರವರ ಸಲಹೆಗಳ ಮುಖಾಂತರ ಇವರು ವಿಮೋಚನ ಹೋರಾಟಕ್ಕೆ ಮುಂದಾಗುತ್ತಿದ್ದರು. ನಿಜಾಂನ ವಿರುದ್ದವಾಗಿ ಕುಷ್ಟಗಿ, ನಿಲೋಗಲ್, ಸುತ್ತಮುತ್ತ ಗ್ರಾಮಗಳಲ್ಲಿನ ಜನರನ್ನು ಸಂಘಟಿಸಿ ವಿಮೋಚನ ಹೋರಾಟಕ್ಕೆ ಪ್ರೇರೆಪಿಸುತ್ತಿದ್ದರು. ಗಜೇಂದ್ರಗಡ ಶಿಬಿರದ ಉಪಶಿಬಿರಾಧಿಪತಿಯಾಗಿರುವ ಸಂದರ್ಭದಲ್ಲಿ ತುಮರುಗುದ್ದಿ ಲೇವಿ ಲೂಟಿ ಮಾಡಿ ಶಿಬಿರಕ್ಕೆ ಭತ್ತವನ್ನು ಸಾಗಿಸುವಲ್ಲಿ ಇವರು ತೋರಿದ ಧೈರ್ಯ, ಸಾಹಸ ಸ್ಮರಣೀಯ. ಹಾಗೇಯೇ ಶಿರಗುಂಪಾ ಸುಂಕದ ಕಟ್ಟೆಗೆ ಬೆಂಕಿಹಚ್ಚಿ ರಜಾಕಾರರಲ್ಲಿ ನಡುಕ ಹುಟ್ಟಿಸಿದರು. ಗಜೆಂದ್ರಗಡ ಶಿಬಿರದ ಮಹತ್ವದ ಯಶಸ್ವಿ ದಾಳಿಗಳಲ್ಲಿ ಒಂದಾದ ಯಲಬುರ್ಗಾ ತಹಶೀಲ ಕಛೇರಿ ಮೇಲೆ ನಡೆದ ದಾಳಿಯಲ್ಲಿ ತಮ್ಮ ಧೀರತನವನ್ನು ಎತ್ತಿತೋರಿಸಿದ್ದಾರೆ. ಶಿಬಿರಕ್ಕೆ ಅವಶ್ಯವಿದ್ದ ಹಣಕಾಸಿನ ನೆರವಿಗಾಗಿ ಅದರ ನಿಧಿಸಂಗ್ರಹಕ್ಕಾಗಿ ಗ್ರಾಮಾಂತರ ಪ್ರದೇಶಗಳಿಗೆ ಹೋಗಿ ನಿಧಿ ಸಂಗ್ರಹಿಸಿ, ಶಿಬಿರದ ಕಾರ್ಯಕ್ಕೆ ಉಪಯೋಗಿಸುತ್ತಿದ್ದರು. ಒಂದು ಕಡೆ ಶಿಬಿರದ ಉಸ್ತುವಾರಿ ನೋಡಿಕೊಳ್ಳುತ್ತಾ, ಮತ್ತೊಂದು ಕಡೆ ಸಾಮಾನ್ಯ ಜನತೆಯ ತೊದರೆಗಳ ಬಗ್ಗೆ ಚರ್ಚಿಸಿ, ಸಮಸ್ಯೆಯ ಕುರಿತು ನಿಜಾಂನಿಗೆ ಪತ್ರ ರವಾನಿಸುತ್ತಿದ್ದರು. ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದಲ್ಲಿ ಶಿಸ್ತು, ಸಂಯಮಕ್ಕೆ ವಿಜಯರಾವ್ ದೇಸಾಯಿರವರ ಹೆಸರು ಚಿರಪರಿಚಿತ. ಕೆಲವು ಕಾಲ ಹೈದರಾಬಾದ ಕರ್ನಾಟಕ ಪ್ರಾಂತೀಯ ಕಛೇರಿಯಾದ ಗದಗನಲ್ಲಿ ಕಾರ್ಯನಿರ್ವಹಿಸಿ ಮತ್ತೆ ವಿಮೋಚನ ಹೋರಾಟದಲ್ಲಿ ಧುಮುಕಿದರು.

## ಅಡಿಟಿಪ್ಪಣಿಗಳು

೧. ಸುಭಾಸಚಂದ್ರ ದೊಡ್ಡಮನಿ (ಸಂಶೋಧನೆ) - 'ಹೈದರಾಬಾದ್ ವಿಮೋಚನ ಆಂದೋಲನದಲ್ಲಿ ಕಲ್ಬುರ್ಗಿ ಜಿಲ್ಲೆ ಶಿಬಿರಗಳ ಪಾತ್ರ' (ಅಪ್ರಕಟಿತ ಎಂ.ಫಿಲ್. ಪ್ರಬಂಧ) - ೨೦೦೨, ಪುಟ-೯೨

೨. ಸೂರ್ಯನಾಥ ಕಾಮತ್ (ಸಂ) 'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು' - ೧೯೭೭, ಪುಟ-೮೪೮-೪೯

೩. ದೇಶಿಕ ಹಿರೇಮಠ (ಲೇ) 'ಅಳವಂಡಿ ಶಿವಮೂರ್ತಿಸ್ವಾಮಿ' (ಅಭಿನಂದನ ಲೇಖನ) ಪುಟ-೨೮.

೪. ಅದೇ - ಪುಟ-೨೯

೫. ಸೂರ್ಯನಾಥ ಕಾಮತ್ (ಸಂ) 'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು' - ೧೯೭೭ ಪುಟ-೮೪೭

೬. ಸೂರ್ಯನಾಥ ಕಾಮತ್ (ಲೇ) 'ವೀರಭದ್ರಪ್ಪ ಶಿರೂರು' - ೧೯೮೦, ಪುಟ-೧೯

೭. ಅದೇ - ಪುಟ-೨೬.

೮. ರಾಮಣ್ಣ ಹವಳೆ (ಲೇ) 'ಸ್ವಾತಂತ್ರ್ಯ ಸೇನಾನಿ ಪುಂಡಲೀಕಪ್ಪ ಜ್ಞಾನಮೋರೆ' ೧೯೯೬, ಪುಟ-೧೧

೯. ಎಸ್.ಎಂ.ಬಂಗಾರಶೆಟ್ಟರ್ - 'ವಿಮೋಚನ ಹೋರಾಟಗಾರರು' (ಸಂದರ್ಶನ) - ೨೧-೦೧-೦೪

೧೦. ರಾಮ್ಮಣ ಹವಳೆ - 'ಸ್ವಾತಂತ್ರ್ಯ ಹೋರಾಟದಲ್ಲಿ ಗಜೇಂದ್ರಗಡ ಶಿಬಿರ', ೧೯೯೬ - ಪುಟ-೫೬.

ಅಧ್ಯಾಯ ೫

# ಸಮಾರೋಪ

ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದಲ್ಲಿ ಕೊಪ್ಪಳವು ವೈವಿಧ್ಯಮಯ ಚರಿತ್ರೆ, ಮತ್ತು ಸಂಸ್ಕೃತಿಯನ್ನು ಹೊಂದಿರುವ ಕಾರಣ ಪ್ರಮುಖವಾಗಿದೆ. ಕೊಪ್ಪಳವು ಜಹಗೀರು ಜಿಲ್ಲೆಯಾದ್ದರಿಂದ ಇದು ನಿಜಾಂ ಹಾಗೂ ನವಾಬ ಸಾಲಾರಜಂಗನ ಹಿಡಿತದಲ್ಲಿತ್ತು.ಇಲ್ಲಿನ ಜನತೆ ಎರಡು ರೀತಿಯ ಅಧಿಕಾರವನ್ನು ಎದುರಿಸಬೇಕಾಗಿತ್ತು.

ಹೈದರಾಬಾದ್ ಕರ್ನಾಟಕ ಪ್ರಾದೇಶಿಕ ಗಡಿಭಾಗದಲ್ಲಿರುವ ಹಾಗೂ ಇಂದು ಮುಂಬೈ ಕರ್ನಾಟಕ ಪ್ರಾಂತ್ಯಕ್ಕೆ ಒಳಪಟ್ಟಿರುವ ಗದಗ ಜಿಲ್ಲೆಯ ಮುಂಡರಗಿ ಹಾಗೂ ಗಜೇಂದ್ರಗಡ, ಇಟಗಿ ಪ್ರದೇಶಗಳು ಅಂದು ನಿಜಾಂನ ಸಂಸ್ಥಾನಕ್ಕೆ ಒಳಪಟ್ಟಿದ್ದವು. ಆದ್ದರಿಂದ ಇವುಗಳನ್ನು ಕೊಪ್ಪಳ ಜಿಲ್ಲೆಯ ವಿಮೋಚನ ಹೋರಾಟದ ವ್ಯಾಪ್ತಿಯೊಳಗೆ ಚರ್ಚಿಸಿಕೊಂಡು ಹೋಗಲಾಗಿದೆ. ಕೊಪ್ಪಳ ಜಿಲ್ಲೆಯಲ್ಲಿ ರಜಾಕಾರರು ನಡೆಸಿದ ದಬ್ಬಾಳಿಕೆಯನ್ನು ಮೌಖಿಕ ಪರಂಪರೆಯ ಜನಪದ ಹಾಡು, ಬುಲಾಯಿ ಹಾಡು, ಲಾವಣಿಗಳು ಹಾಗೂ ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದಲ್ಲಿ ಹೋರಾಡಿದಂತಹ ವಿಮೋಚನ ರೂವಾರಿಗಳು, ರಜಾಕಾರರ ವಿರುದ್ಧ ಮಾಡಿದ್ದ ಘೋಷಣೆಗಳು ಜನರ ಸ್ಮೃತಿಪಟಲದಲ್ಲಿ ಇನ್ನೂ ಅಚ್ಚಳಿಯದೆ ಉಳಿದುಕೊಂಡಿದೆ. ಅದೇರೀತಿ ರಜಾಕಾರರು ಇಲ್ಲಿನ ಸಾಮಾನ್ಯ ಜನತೆಯ ಮೇಲೆ ನಡಿಸಿದ ದಬ್ಬಾಳಿಕೆಗಳ ಪ್ರದೇಶಗಳು ಈ ಇಂದಿಗೂ ಐತಿಹಾಸಿಕ ನೆನಪುಗಳಾಗಿ ಉಳಿದುಕೊಂಡಿವೆ.

ಆಗಸ್ಟ್ ೧೫, ೧೯೪೭ ಭಾರತಕ್ಕೆ ರಾಜಕೀಯ ಸ್ವಾತಂತ್ರ್ಯ ಲಭಿಸಿತು. ಆದರೆ ಹೈದರಾಬಾದ್ ಸಂಸ್ಥಾನಕ್ಕೆ ಅದು ದೊರೆಯಲಿಲ್ಲ. ಅಂದು ಭಾರತಕ್ಕೆ ಸಂಭ್ರಮದ ದಿನವಾದರೆ ಭಾರತದ ಒಳಗಿರುವ ಈ ಹೈದರಾಬಾದ್ ಕರ್ನಾಟಕದ ಜನರಿಗೆ ಆತಂಕದ ದಿನವಾಯಿತು. ಭಾರತದ ರಾಷ್ಟ್ರಧ್ವಜವನ್ನು ಈ ಪ್ರಾಂತ್ಯದ ಯಾವ ಭಾಗದಲ್ಲೂ ಹಾರಿಸಬಾರದೆಂದು ನಿಜಾಂ ಸರಕಾರವು ಕಠೋರ ನಿರ್ಬಂದ ವಿಧಿಸಿತು. ಇದರಿಂದ ರಾಷ್ಟ್ರಪ್ರೇಮ

ವಿರುವ ಅನೇಕ ಜನರು ಧ್ವಜ ಹಾರಿಸಿ ಬಂಧನಕ್ಕೊಳಗಾದರು. ಇಲ್ಲಿಂದಲೇ ಹೋರಾಟದ ಕಿಡಿಗಳು, ಆರಂಭ ವಾಗಿ, ವಿಮೋಚನ ಹೋರಾಟವಾಗಿ ರೂಪಗೊಂಡಿತು. ಮುಂದೆ ಇದು ಹೈದರಾಬಾದ್ ಕರ್ನಾಟಕವನ್ನು ಬಿಡುಗಡೆಗೊಳಿಸುವಲ್ಲಿ ಯಶಸ್ವಿಯಾಯಿತು.

ಹೈದರಾಬಾದ್ ಕರ್ನಾಟಕದ ಬೀದರ್, ಗುಲ್ಬರ್ಗಾ, ರಾಯಚೂರು ಜಿಲ್ಲೆಗಳ ಜನತೆಯ ಹೋರಾಟಕ್ಕಿಂತ ಕೊಪ್ಪಳ ಜಿಲ್ಲೆಯ ಜನತೆಯ ಹೋರಾಟವು ವಿಭಿನ್ನವಾಗಿ ಕಂಡುಬರುವುದು. ನಿಜಾಂನ ವಿರುದ್ಧಕ್ಕಿಂತಲೂ ರಜಾಕಾರರ ವಿರುದ್ಧವಾಗಿ ಇಲ್ಲಿಯ ಜನತೆಯು ಸಾಂಘಿಕ ಹೋರಾಟವನ್ನು ಮಾಡಿತು. ಸಮಾಜದ ಎಲ್ಲಾ ನಿಟ್ಟಿನಿಂದಲೂ ಹೋರಾಟದ ಪ್ರತಿಕ್ರಿಯೆಗಳು ಕಂಡುಬಂದವು. ರಜಾಕಾರರ ವಿರುದ್ಧ ಬೇಟಗೇರಿ ಗ್ರಾಮದ ಮಹಿಳೆಯರಾದ ಪಾತರದ 'ಗೌರಕ್ಕ ಮತ್ತು ಶಾವಕ್ಕ'ರ ಹೋರಾಟವನ್ನು ನೆನಪು ಮಾಡಿಕೊಳ್ಳಬೇಕಾಗಿರುವದು ಆದ್ಯ ಕರ್ತವ್ಯವಾಗಿದೆ. ಇತರ ಜಿಲ್ಲೆಗಳ ಸಾಮಾಜಿಕ ಜೀವನಕ್ಕಿಂತ ಕೊಪ್ಪಳ ಜಿಲ್ಲೆಯ ಜನರ ಸಾಮಾಜಿಕ ಜೀವನದಲ್ಲಿ ತುಂಬಾ ವ್ಯತ್ಯಾಸವಿದೆ. ಹೈದರಾಬಾದ್ ಕರ್ನಾಟಕದ ವಿಮೋಚನೆಗಾಗಿ ತಮ್ಮ ದೇಹವನ್ನೇ ಮುಡುಪಾಗಿಟ್ಟು ಸ್ವಾತಂತ್ರ್ಯಕ್ಕಾಗಿ ತ್ಯಾಗ ಮಾಡಿದವರಲ್ಲಿ ವೀರಸನ್ಯಾಸಿ, ಆಯುರ್ವೇದ ತಜ್ಞ, ಮುರುಡಿ ಭೀಮಜ್ಜನವರನ್ನು ಇಲ್ಲಿ ಸ್ಮರಿಸಲೇಬೇಕು. ವೀರಭದ್ರಪ್ಪ ಶಿರೂರು, ರಾಚಯ್ಯ, ಕೆ.ವಿರುಪಾಕ್ಷಪ್ಪ ಮತ್ತು ದಾಸಪ್ಪರ ಸ್ಮರಣೀಯ ಹೋರಾಟವನ್ನು ಇಲ್ಲಿ ನೆನೆಯಬೇಕಾಗಿದೆ. ಅದರಂತೆ ಶ್ರೀ ಶಿವಮೂರ್ತಿಸ್ವಾಮಿ ಅಳವಂಡಿ, ಪುಂಡಲೀಕಪ್ಪ ಜ್ಞಾನಮೋಠೆ, ಎಸ್.ಎಂ.ಬಂಗಾರಶೆಟ್ಟರ್, ವಿಜಯರಾವ್ ದೇಸಾಯಿರವರ ಕೆಚ್ಚೆದೆಯ ಹೋರಾಟ ಕಂಡು ರಜಾಕಾರರು ಹೆದರಿದರು.

ಮೊದಲು ಪ್ರಸ್ತಾವನೆಯನ್ನು ತಿಳಿಸುತ್ತಾ, ಮೊದಲನೇ ಅಧ್ಯಾಯದಲ್ಲಿ ಅಧ್ಯಯನದ ಉದ್ದೇಶ, ವ್ಯಾಪ್ತಿ ಹಾಗೂ ಸ್ವರೂಪಗಳನ್ನು ತಿಳಿಸಿದೆ. ಕೊಪ್ಪಳ ಜಿಲ್ಲೆಯ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆಗಳನ್ನು ತಿಳಿಸಿದ್ದು, ಎರಡನೆಯ ಅಧ್ಯಾಯದಲ್ಲಿ ವಿಮೋಚನೆ ಹೋರಾಟಗಾರರ ಸ್ಪೂರ್ತಿ ಹಾಗೂ ಅವರ ಮಾರ್ಗದರ್ಶನದಿಂದ ನಿಜಾಂನ ವಿರುದ್ಧ ಹೋರಾಡಲು ಹೈದರಾಬಾದ್ ಕರ್ನಾಟಕ ಪ್ರಾಂತ್ಯದ ಜನತೆ ಹೇಗೆ ಮುಂದಾದರು ಎಂಬುದನ್ನು ತಿಳಿಸಲಾಗಿದೆ. ಇಲ್ಲಿನ ಅನೇಕ ರಾಷ್ಟ್ರೀಯ ಹೋರಾಟಗಾರರು ಸೇರಿ ಈ ಪ್ರಾಂತ್ಯಗಳಲ್ಲಿ ಸಂಚರಿಸಿ ಜನತೆಗೆ ರಾಷ್ಟ್ರೀಯತೆಯನ್ನು ಹೆಚ್ಚಿಸಲು ಶ್ರಮಿಸಿದರು. ಯಲಬುರ್ಗಾ, ಕುಕನೂರು, ಆಡೂರುಗಳಲ್ಲಿ ವೀರಭದ್ರಪ್ಪ ಶಿರೂರವರ ನೇತೃತ್ವದಲ್ಲಿ ವಾಚನಾಲಯಗಳು ಪ್ರಾರಂಭವಾದವು. ಹಾಗೂ ಖಾದಿ ಭಂಡಾರಗಳನ್ನು ಪ್ರಾರಂಭಿಸಿದರು. ಹೈದರಾಬಾದ್ ಕರ್ನಾಟಕವನ್ನು ನಿಜಾಂನ ವಿರುದ್ಧ ಹೋರಾಟವು ತೀವ್ರವಾಗಲು ೧೯೩೮ ರಲ್ಲಿ ಸ್ವಾಮಿರಮಾನಂದರ ಮುಖಂಡತ್ವದಲ್ಲಿ ಸ್ಥಾಪನೆಯಾದ ಹೈದರಬಾದ್ 'ಸ್ಟೇಟ್-ಕಾಂಗ್ರೆಸ್' ಕೂಡ ಕಾರಣವಾಯಿತು. ಈ ಮುಖಂಡರ ಧೈರ್ಯ, ಸಾಹಸ ಕಂಡು ವಿಮೋಚನ ಹೋರಾಟಗಾರರು ಆರ್ಯ ಸಮಾಜವನ್ನು ಸ್ಥಾಪಿಸಿ ಇದರ ಮೂಲಕ ನಿಜಾಂನ ಮತಾಂಧ ನೀತಿಯನ್ನು ವಿರೋಧಿಸಿ ಅನೇಕ ಕಾರ್ಯಕರ್ತರು

ಜೈಲು ಸೇರಿದರು. ಇನ್ನೂ ಕೆಲವರು ಹುತಾತ್ಮರಾದರು. ಹೈದರಾಬಾದ್ ಪ್ರಾಂತ್ಯವನ್ನು ಪ್ರತ್ಯೇಕ ಮುಸ್ಲಿಂ ರಾಷ್ಟ್ರ ಮಾಡಬೇಕೆಂದು ಕನಸು ಕಾಣುತ್ತಿದ್ದ ನಿಜಾಂ ಮೀರ್ ಉಸ್ಮಾನ್ ಅಲಿಖಾನನು ಹೈದರಾಬಾದ್ ಕರ್ನಾಟಕ ಪ್ರಾಂತ್ಯದ ಜನತೆಯ ಮೇಲೆ ದಬ್ಬಾಳಿಕೆ ನಡೆಸಿದನು. ಭಾಷಾ ಕಟ್ಟು ಪಾಡುಗಳನ್ನು ವಿಧಿಸಿದನು. ಆಡಳಿತದಲ್ಲಿ ಉರ್ದು ಭಾಷೆಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡಿ ದೇಶಿಯ ಭಾಷೆಗಳನ್ನು ತಿರಸ್ಕರಿಸಿದನು. ಇದನ್ನು ಸಹಿಸಲಾರದ ಜನತೆಯು ನಿಜಾಂನ ಭಾಷಾ ದಬ್ಬಾಳಿಕೆಯನ್ನು ವಿರೋಧಿಸಿದರು.

ಅನೇಕ ವಿಮೋಚನ ಹೋರಾಟಗಾರರು ಕನ್ನಡ ಶಾಲೆಗಳನ್ನು ಸ್ಥಾಪಿಸಿದರು. ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲೂಕಿನ ಕುಕನೂರಿನಲ್ಲಿ ಕ್ರಿ.ಶ. ೧೯೨೨ರಲ್ಲಿ ರಾಘವೇಂದ್ರ ದೇಸಾಯಿಯವರು ಗುರುಕುಲ ವಿದ್ಯಾಲಯ ರಾಷ್ಟ್ರೀಯ ಶಾಲೆಯನ್ನು ಪ್ರಾರಂಭಿಸಿದರು. ಅದರಂತೆ ಆಡೂರಿನಲ್ಲಿಯೂ ಕೂಡ ವೀರಭದ್ರಪ್ಪ ಶಿರೂರವರು ರಾಷ್ಟ್ರೀಯ ಶಾಲೆಗಳನ್ನು ತೆರೆದು ಕನ್ನಡಿಗರಿಗೆ ಕನ್ನಡ ಭಾಷೆಯಲ್ಲಿ ಶಿಕ್ಷಣ ಕಲಿಯಲು ಅನುವು ಮಾಡಿದರು. ಹೀಗೆ ಕೊಪ್ಪಳ ಜಿಲ್ಲೆಯ ಅನೇಕ ಕಡೆ ಕನ್ನಡ ಶಾಲೆಗಳನ್ನು ಸ್ಥಾಪಿಸಲಾಯಿತು. ಈ ರಾಷ್ಟ್ರೀಯ ಶಾಲೆಯ ಅನೇಕ ಶಿಕ್ಷಕರು ವಿದ್ಯಾರ್ಥಿಗಳಿಗೆ ರಾಷ್ಟ್ರಭಕ್ತಿ ಹಾಗೂ ರಾಷ್ಟ್ರೀಯತೆಯ ಪೂರಕವಾಗಿ ವಿಚಾರಗಳನ್ನು ಭೋದಿಸಿ ವಿಮೋಚನ ಹೋರಾಟದಲ್ಲಿ ಧುಮುಕಲು ಪ್ರೇರಣೆ ನೀಡಿದರು. 'ವಂದೇ ಮಾತರಂ' ಎಂಬ ಸ್ವಾತಂತ್ರ್ಯ ಹೋರಾಟಗಾರರ ಮಂತ್ರವು ಹೈದರಾಬಾದ್ ಕರ್ನಾಟಕ ಪ್ರಾಂತ್ಯದಲ್ಲೆಡೆ ಹರಡಿತು. ವಿಮೋಚನ ಹೋರಾಟಗಾರರು 'ವಂದೇ ಮಾತರಂ' ಗೀತೆ ಹಾಡಿ ಬಂಧನಕ್ಕೊಳಗಾದರು. ವಿದ್ಯಾರ್ಥಿಗಳು ಶಾಲಾ ಕಾಲೇಜಗಳನ್ನು ತೊರೆಯಬೇಕಾಯಿತು. ಈ ಹೋರಾಟವನ್ನು ತಡೆಯಲು ನಿಜಾಂನು ಕಾಶಿಂರಜ್ವಿಯ ನೇತೃತ್ವದಲ್ಲಿ ರಜಾಕಾರ ಎಂಬ ಮುಸ್ಲಿಂ ಸ್ವಯಂ ಸೇವಕರನ್ನು ಹುರಿದುಂಬಿಸಿ ಈ ಭಾಗಗಳಲ್ಲೆಲ್ಲಾ ಕೊಲೆ, ಸುಲಿಗೆ, ದರೋಡೆ, ಅತ್ಯಾಚಾರಗಳನ್ನು ನಡೆಸಿದನು. ರಜಾಕಾರರ ದಬ್ಬಾಳಿಕೆಗೆ ಅನೇಕ ಗ್ರಾಮಗಳು ತುತ್ತಾಗಿ ಜನರು ಗಡಿದಾಟಿ ವಲಸೆಹೋಗಲು ಪ್ರಾರಂಭಿಸಿದರು. ಇದನ್ನು ತಡೆಗಟ್ಟಲು ಈ ಭಾಗದ ವಿಮೋಚನ ಹೋರಾಟಗಾರರು ಶಿಬಿರಗಳನ್ನು ಸ್ಥಾಪಿಸಿ ಜನತೆಯನ್ನು ರಕ್ಷಿಸುವದಕ್ಕೋಸ್ಕರ ಶ್ರಮಿಸಿದರು. ನಂತರ ಸರ್ದಾರ್ ವಲ್ಲಭಬಾಯಿ ಪಟೇಲ್ ಅವರ ಮುಖಂಡತ್ವದಲ್ಲಿ ಭಾರತೀಯ ಸೈನ್ಯವು ರಜಾಕಾರರ ಅಡಗುದಾಣಗಳನ್ನು ನಾಶಮಾಡುತ್ತಾ ನಿಜಾಂ ಪೊಲೀಸರ ಜೊತೆ ಹೋರಾಟ ಮಾಡಿ, ಹೈದರಾಬಾದ್‌ನ ನಿಜಾಂನಾದ ಮೀರ್ ಉಸ್ಮಾನ್ ಅಲಿಖಾನರನ್ನು ಶರಣಾಗುವಂತೆ ಮಾಡಿತು. ಸ್ವಾತಂತ್ರ್ಯ ಭಾರತದ ಒಕ್ಕೂಟದಲ್ಲಿ ಹೈದರಾಬಾದ್ ಕರ್ನಾಟಕವು ಸೇರ್ಪಡೆಯಾಯಿತು.

ಮೂರನೇ ಅಧ್ಯಾಯದಲ್ಲಿ ಕೊಪ್ಪಳ ಜಿಲ್ಲೆಯ ಶಿಬಿರಗಳ ಬಗ್ಗೆ ಅಧ್ಯಯನ ಮಾಡಲಾಗಿದೆ. ಹೈದರಾಬಾದ್ ಕರ್ನಾಟಕ ಪ್ರಾಂತ್ಯದಲ್ಲಿ ರಜಾಕಾರರ ಹಾವಳಿಯು ವಿಪರಿತವಾಗಿತ್ತು. ಕಾಶಿಂರಜ್ವಿಯ ನಾಯಕತ್ವದಲ್ಲಿ ಮುಸ್ಲಿಂ ಸಂಘಟನೆಯು ಹಿಂದೂಗಳ ಮೇಲೆ ದಬ್ಬಾಳಿಕೆಗಳನ್ನು ನಿರಾಂತಕವಾಗಿ ಮಾಡುತ್ತಲಿತ್ತು. ಕೊಪ್ಪಳ ಜಿಲ್ಲೆಯ

ಜನತೆಯ ಜೀವನವು ಚಿಂತಾಜನಕ ಸ್ಥಿತಿಯಲ್ಲಿತ್ತು. ನಿಜಾಂನನ್ನು ಕೈಗೊಂಬೆಯಾಗಿ ಮಾಡಿಕೊಂಡು ರಜಾಕಾರರು ಹೀನಾಯವಾದ ದುಷ್ಕೃತ್ಯಗಳಲ್ಲಿ ತೊಡಗಿದರು. ಅತ್ಯಾಚಾರ, ಲೂಟಿ, ದರೋಡೆ, ಮಾನಭಂಗದಂತಹ ಅಮಾನವೀಯ ಕಾರ್ಯಗಳಲ್ಲಿ ತೊಡಗಿ, ಇಲ್ಲಿನ ಜನ ಜೀವನವನ್ನು ದುಸ್ಥಿತಿಗೆ ತಂದರು. ಈ ಭಾಗದ ಅನೇಕ ವಿಮೋಚನ ಹೋರಾಟಗಾರರು ನೊಂದ ಜನತೆಗೆ ಧೈರ್ಯ ತುಂಬಲು ಹಾಗೂ ಜನರನ್ನು ಸಂಘಟಿಸಿ ಜನಾಂದೋಲನ ನಡೆಸುವದಕ್ಕೆ ಬಹಳವಾಗಿ ಶ್ರಮಿಸಿದರು. ಹೋರಾಟಕ್ಕಾಗಿ ಕ್ರಿಯಾಸಮಿತಿ ರಚಿಸಲಾಯಿತು. ಮುರುಡಿ ಭೀಮಜ್ಜ, ಶಿವಮೂರ್ತಿಸ್ವಾಮಿ ಅಳವಂಡಿ, ಪುಂಡಲೀಕಪ್ಪ ಜ್ಞಾನಮೋಠೆ, ವೀರುಪಾಕ್ಷಯ್ಯ, ಶಿರೂರು ವೀರಭದ್ರಪ್ಪ, ಡಾ.ಸಿ.ಎಂ.ಚುರ್ಚಿಹಾಳಮಠ, ರಾಚಯ್ಯ, ವಿಜಯರಾವ್ ದೇಸಾಯಿ, ಆರ್.ವಿ.ಬಿಡಪ್ ಇನ್ನೂ ಮುಂತಾದವರ ಮುಖಂಡತ್ವದಲ್ಲಿ ಗಡಿಭಾಗದಲ್ಲಿ ಶಿಬಿರಗಳನ್ನು ಸ್ಥಾಪಿಸಲು ಮುಂದಾದರು. ಅದರಂತೆ ಮುಂಡರಗಿ, ಗಜೇಂದ್ರಗಡ, ಹನುಮನಾಳ, ಇಟಗಿ, ಗುಡ್ಡದ ಮಲ್ಲಾಪುರಗಳಲ್ಲಿ ಶಿಬಿರಗಳನ್ನು ಸ್ಥಾಪಿಸಲಾಯಿತು. ಈ ಶಿಬಿರಗಳಲ್ಲಿ ಒಬ್ಬ ಶಿಬಿರಾಧಿಪತಿ, ದಳನಾಯಕ, ಕೋಶಾಧಿಪತಿ, ಹಾಗೂ ಆಹಾರ ವ್ಯವಸ್ಥೆ ಮಾಡುವವರು ಇದ್ದು, ಒಂದೊಂದು ಶಿಬಿರದಲ್ಲಿ ಮುಖ್ಯಸ್ಥರ ಜೊತೆಗೆ ನೂರಾರು ಜನರು ಹೋರಾಟಕ್ಕೆ ಸಿದ್ದರಾಗಿದ್ದರು. ರಜಾಕಾರರ ವಿರುದ್ಧ ಹೈದರಾಬಾದ್ ಸಂಸ್ಥಾನದಲ್ಲಿ ಸಶಸ್ತ್ರ ಹೋರಾಟ ಮಾಡುವದೇ ಶಿಬಿರಗಳ ಉದ್ದೇಶವಾಯಿತು. ಶಿಬಿರಗಳು ಹೆಚ್ಚು ಕ್ರಿಯಾಶೀಲವಾಗಿ ಹೋರಾಡಿ ರಜಾಕಾರರಿಗೆ ಭಯ ಹುಟ್ಟಿಸಿದವು. ಶಿಬಿರಗಳು ಅವಿರತ ಹೋರಾಟದ ಫಲವಾಗಿ ಸಪ್ಟೆಂಬರ್ ೧೭, ೧೯೪೮ರಂದು ನಿಜಾಂನ ಆಳ್ವಿಕೆಯಿಂದ ಸ್ವತಂತ್ರವಾಯಿತು. ಹೈದರಾಬಾದ್ ಕರ್ನಾಟಕ ರಾಜಕೀಯವಾಗಿ ವಿಮೋಚನವಾಯಿತು.

ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದಲ್ಲಿ ಮಾಧ್ಯಮಗಳ ಪಾತ್ರವು ಮಹತ್ವದ್ದಾಗಿದೆ. ಅದರಂತೆ ರಾಷ್ಟ್ರೀಯ ಶಿಕ್ಷಣ ಸಂಸ್ಥೆಗಳ ಕೊಡುಗೆಯು ಅಪಾರವಾಗಿದೆ. ವಿಮೋಚನ ಹೋರಾಟಗಾರರಿಗೆ ಸ್ಫೂರ್ತಿ ಹಾಗು ರಾಷ್ಟ್ರೀಯತೆ ಪ್ರಜ್ಞೆಯನ್ನು ಮೂಡಿಸಿದವು. ಪತ್ರಿಕೆಗಳು, ಲೇಖನಗಳು, ಕೀರ್ತನಕಾರರು, ಲಾವಣಿಕಾರರು ಯಾವ ರೀತಿಯಾಗಿ ವಿಮೋಚನ ಹೋರಾಟಗಾರರಿಗೆ ಹುರಿದುಂಬಿಸಿ, ಹೋರಾಟದಲ್ಲಿ ಧುಮುಕುವಂತೆ ಪ್ರೇರಿಪಿಸಿದವು ಎಂಬುದನ್ನು ತಿಳಿಸಲಾಗಿದೆ. ಈ ವಿಮೋಚನ ಹೋರಾಟದಲ್ಲಿ 'ದಿ ಡೆಮಾಕ್ರಾಟ್', ಇಮ್‌ರೋಜ್ ಎಂಬ ಉರ್ದು ಪತ್ರಿಕೆಯ ಪಾತ್ರ ಚಿರಸ್ಮರಣೀಯವಾದುದಾಗಿದೆ. ಈ ಪತ್ರಿಕೆಗಳು ನಿಜಾಂನ ಕ್ರೂರ ನೀತಿ ಹಾಗು ರಜಾಕಾರರ ದಬ್ಬಾಳಿಕೆಗಳನ್ನು ಪತ್ರಿಕೆ ಮುಖಪುಟಗಳಲ್ಲಿ ಮುದ್ರಿಸಿ ಹೈದರಾಬಾದ್ ಕರ್ನಾಟಕ ಪ್ರಾಂತ್ಯದ ಜನತೆಗೆ ಮುಟ್ಟಿಸುತ್ತಿದ್ದವು. ರಜಾಕಾರರ ಅತ್ಯಾಚಾರಗಳನ್ನು ಬಯಲಿಗೆಳೆದು ಜನತೆಯಲ್ಲಿ ನಿಜಾಂನ ವಿರುದ್ಧ ಹೋರಾಟ ನಡೆಸಲು ಪ್ರೇರೆಪಿಸುತ್ತಿದ್ದವು. ಅದರಂತೆ ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲೂಕಿನ ಕುಕನೂರಿನಲ್ಲಿ ವಿದ್ಯಾನಂದ ಗುರುಕುಲ ರಾಷ್ಟ್ರೀಯ ಶಾಲೆಯು ರಾಷ್ಟ್ರೀಯತೆಗೆ ಪೂರಕವಾಗಿ ವಿಚಾರಗಳನ್ನು ವಿದ್ಯಾರ್ಥಿಗಳಿಗೆ ತಿಳಿಸುತ್ತಾ ವಿದ್ಯಾರ್ಥಿಗಳಿಗೆ ಹೋರಾಟದಲ್ಲಿ ಧುಮುಕಲು ಪ್ರಚೋದನೆ ನೀಡುತ್ತಿತ್ತು. ಹಾಗೇಯೆ ಆಡೂರಿನಲ್ಲಿ, ಸಂಗನಹಾಳ, ರಾಜೂರುಗಳಲ್ಲಿ ರಾಷ್ಟ್ರೀಯ ಶಾಲೆಗಳು ಪ್ರಾರಂಭವಾಗಿ ಪರೋಕ್ಷವಾಗಿ ಹೋರಾಟದಲ್ಲಿ ಭಾಗವಹಿಸಲು ನೆರವಾದವು.

ನಾಲ್ಕನೆಯ ಅಧ್ಯಾಯದಲ್ಲಿ ವಿಮೋಚನ ಹೋರಾಟದ ರೂವಾರಿಗಳನ್ನು ಪರಿಚಯಿಸುತ್ತಾ, ಅವರ ಹೋರಾಟದಲ್ಲಿಯ ಧೈರ್ಯ, ಸಾಹಸಗಳನ್ನು ತಿಳಿಸುತ್ತಾ ಅವರ ಹೋರಾಟದ ಕ್ರಮಗಳನ್ನು ಕಂಡುಕೊಳ್ಳುತ್ತೇವೆ. ಕೊಪ್ಪಳ ಜಿಲ್ಲೆಯಲ್ಲಿ ಸುಮಾರು ೩೦೦ ಕ್ಕೂ ಹೆಚ್ಚು ವಿಮೋಚನ ಹೋರಾಟಗಾರರಿದ್ದಾರೆ. ಇವರಲ್ಲಿ ಕೆಲವರು ಜೀವಂತವಿದ್ದು ಅಂದಿನ ನಿಜಾಂನ ಸ್ಥಿತಿಗತಿಗಳನ್ನು, ರಜಾಕಾರರ ಅಮಾನವೀಯ ಕೃತ್ಯಗಳನ್ನು ಕಣ್ಣಾರೆ ಕಂಡು ಹಾಗು ಅನುಭವಿಸಿದ ನೋವಿನ ಕಥೆಯನ್ನು ಹೇಳುತ್ತಾರೆ. ಪ್ರಸ್ತುತ ಕೊಪ್ಪಳ ಜಿಲ್ಲೆಯಲ್ಲಿ ಅಳವಂಡಿಯ ಶಿವಮೂರ್ತಿಸ್ವಾಮಿ, ಪುಂಡಲೀಕಪ್ಪ ಜ್ಞಾನಮೋಠೆ, ವಿಜಯರಾವ್ ದೇಸಾಯಿ, ಕೃಷ್ಣಪ್ಪ, ಎಸ್.ಎಂ.ಬಂಗಾರಶೆಟ್ಟರ್, ವೀರುಪಾಕ್ಷಪ್ಪ ಅವರು ತಮ್ಮ ಹೋರಾಟದ ಅನುಭವಗಳನ್ನು ಹಂಚಿಕೊಂಡರು. ಅನೇಕರು ಹೈದರಾಬಾದ್ ಕರ್ನಾಟಕ ವಿಮೋಚನ ಹೋರಾಟದಲ್ಲಿ ನಿಜಾಂನ ಹಾಗೂ ರಜಾಕಾರರ ವಿರುದ್ಧ ಹೋರಾಟ ನಡೆಸಿ ದೇಶಕ್ಕಾಗಿ ತ್ಯಾಗ ಮಾಡಿದ್ದಾರೆ.

ಹೈದರಾಬಾದ್ ಕರ್ನಾಟಕದ ಬೀದರ್, ಗುಲ್ಬರ್ಗಾ, ರಾಯಚೂರು, ಕೊಪ್ಪಳ, ಬಳ್ಳಾರಿ ಜಿಲ್ಲೆಗಳ ಪರಿಸ್ಥಿತಿ ಇಂದಿಗೂ ಕೂಡ ನಿಜಾಂನ ಕರಾಳ ರೂಪವನ್ನೆ ಪ್ರತಿರೂಪಿಸುತ್ತಿವೆ. ನಿಜಾಂನ ಕ್ರೂರ ನೀತಿ ಹಾಗೂ ರಜಾಕಾರರ ದಬ್ಬಾಳಿಕೆಗಳಿಂದ ಇಲ್ಲಿನ ಜನತೆಯ ಸ್ಥಿತಿಯು ಶೋಚನೀಯವಾಗಿತ್ತು. ಮೊದಲೇ ಸಾಮಾಜಿಕವಾಗಿ, ಆರ್ಥಿಕವಾಗಿ ತೀರಾ ನಿಕೃಷ್ಠ ಮಟ್ಟದಲ್ಲಿದ್ದ ಕೊಪ್ಪಳ ಜಿಲ್ಲೆಯ ಜನತೆಯ ಪರಿಸ್ಥಿತಿಯು ಶೈಕ್ಷಣಿಕವಾಗಿ ತೀರಾ ಹಿಂದುಳಿದ ಪ್ರದೇಶವಾಗಿದೆ. ಈ ಜಿಲ್ಲೆಯ ಹೋರಾಟವು ಹೈದರಾಬಾದ್ ಕರ್ನಾಟಕದ ಗುಲಬರ್ಗಾ, ಬೀದರ್, ರಾಯಚೂರು ಜಿಲ್ಲೆಗಳ ಹೋರಾಟಕ್ಕಿಂತ ಭಿನ್ನವಾಗಿದೆ. ಕೊಪ್ಪಳ ಜಿಲ್ಲೆಯ ವಿಮೋಚನ ಹೋರಾಟವು ಸಾಮಾನ್ಯ ಜನತೆಯ ಸಂಘಟನಾತ್ಮಕ ಹೋರಾಟವಾಗಿದೆ.

ಇಲ್ಲಿ ಸ್ವಾಮಿ ರಮಾನಂದ ತೀರ್ಥರಕ್ಕಿಂತಲೂ ಮಹತ್ಮಾಗಾಂಧೀಜಿಯವರ ಪ್ರಭಾವವು ಮಹತ್ತರವಾಗಿದೆ. 'ಚಲೇಜಾವ್' ಚಳವಳಿಯ ನಿಮಿತ್ತ ಕೊಪ್ಪಳ ಜಿಲ್ಲೆಯ ಭಾನಾಪೂರದಲ್ಲಿ ನಡೆದ ಸಮಾವೇಶಧಲ್ಲಿ ಭಾಗವಹಿಸಿದ್ದು ಕೂಡ ಇಲ್ಲಿನ ಜನರಲ್ಲಿ ವಿಮೋಚನ ಹೋರಾಟದಲ್ಲಿ ಧುಮುಕಲು ಕಾರಣವಾಗಿದೆ. ವಿಮೋಚನ ಹೋರಾಟದಲ್ಲಿ ಮಹಿಳೆಯರು ಕೂಡ ಪರೋಕ್ಷವಾಗಿ ಹೋರಾಟ ಮಾಡಿರುವುದು ಕಂಡು ಬರುತ್ತದೆ. ಇಲ್ಲಿ ಆಡಳಿತ ಭಾಷೆಯು ಉರ್ದುವಾಗಿ, ಮನೆ ಭಾಷೆ ಮಾತ್ರ ಕನ್ನಡವಾಗಿತ್ತು. ವಿಮೋಚನ ಹೋರಾಟದ ೬೫ ವರ್ಷಗಳ ನಂತರ ಮತ್ತೆ ಇಂದು ಕೊಪ್ಪಳವು ಜಿಲ್ಲಾ ಕೇಂದ್ರವಾಗಿ ಅಭಿವೃದ್ಧಿಯತ್ತ ಹೆಜ್ಜೆ ಹಾಕುತ್ತಲಿದೆ. ಆ ನಿಟ್ಟಿನಲ್ಲಿ ನಿಜಾಂರ ಹಾಗೂ ರಜಾಕಾರರ ಕಪಿಮುಷ್ಠಿಯಿಂದ ಬಿಡಿಸಿಕೊಳ್ಳಲು ಮಾಡಿದ ಹೋರಾಟವನ್ನು ಕೊಪ್ಪಳ ಜಿಲ್ಲೆಯ ಶಿಬಿರಗಳ ಮೂಲಕ ವಿವರಿಸಲು ಇದೊಂದು ಸಣ್ಣ ಪ್ರಯತ್ನವಾಗಿದೆ.

# ಗ್ರಂಥಋಣ

## ಕನ್ನಡ


೧. ಅಮರೇಶ ನುಗಡೋಣಿ : 'ರಾಯಚೂರು ಜಿಲ್ಲೆಯಲ್ಲಿ ಹೈದರಾಬಾದು ಕರ್ನಾಟಕ ವಿಮೋಚನೆ ಚಳವಳಿ' ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೨೦೦೦.

೨. ಅಮರೇಶ ನುಗಡೋಣಿ : 'ಹೈದರಾಬಾದ್ ಕರ್ನಾಟಕದ ಹಾಡು - ಪಾಡು' ಪ್ರಸಾರಾಂಗ, ಕನ್ನಡ, ವಿ.ವಿ. ಹಂಪಿ. ೨೦೦೩.

೩. ಅಶ್ವಥ್ ಡಿ.ಎಸ್ : 'ಕೊಪ್ಪಳ ಒಂದು ಸಾಂಸ್ಕೃತಿಕ ಅಧ್ಯಯನ' (ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ) ಕನ್ನಡ ವಿ.ವಿ. ಹಂಪಿ, ೨೦೦೧

೪. ಗೋಪಾಲ್‌ರಾವ್ ಹೇಜಿಬ್ : 'ಹೈದರಾಬಾದ್ ಮುಕ್ತಿ ಸಂಘರ್ಷ' ರಾಷ್ಟ್ರೋತ್ಥಾನ ಸಾಹಿತ್ಯ, ಕೇಶವಶಿಲ್ಪ, ಬೆಂಗಳೂರು, ೨೦೦೧

೫. ಚಂದ್ರಶೇಖರ ಎಸ್. : (ಸಂ) 'ಕರ್ನಾಟಕ ಚರಿತ್ರೆ'' ಸಂಪುಟ ೫ ಪ್ರಸಾರಾಂಗ, ಕನ್ನಡ,ವಿ.ವಿ. ಹಂಪಿ, ೧೯೯೮

೬. ಚಂದ್ರಶೇಖರ ಎಸ್. : 'ಆಧುನಿಕ ಕರ್ನಾಟಕದ ಆಂದೋಲನಗಳು' ನಮ್ಮ ಪ್ರಕಾಶನ, ಬಿಳಿಗಿರಿ, ತಿಪಟೂರು, ೨೦೦೨

೭. ಚಂದ್ರಶೇಖರ ಟಿ.ಆರ್. : (ಸಂ) 'ಕೊಪ್ಪಳ ಜಿಲ್ಲಾ ಅಭಿವೃದ್ಧಿ ಅಧ್ಯಯನ' ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ, ೨೦೦೨

೮. ಚುರ್ಚಿಹಾಳಮಠ.ಸಿ.ಎಂ. (ಸಂ) : 'ಮುಂಡರಗಿ ನಾಡ ಸ್ವಾತಂತ್ರ್ಯ ಸಂಗ್ರಾಮ ಮತ್ತು ಹೈದರಾಬಾದ್ ವಿಮೋಚನ ಹೋರಾಟ' ಮುಂಡರಗಿ ತಾಲೂಕು ಸ್ವಾತಂತ್ರ್ಯ ಯೋಧರ ಸಂಘ, ಮುಂಡರಗಿ, ೧೯೯೯

೯. ಚನ್ನಬಸವ ಹಿರೇಮಠ : 'ರಾಯಚೂರು - ಕೊಪ್ಪಳ ಜಿಲ್ಲೆಯ ಶಾಸನಗಳು' ಚೇತನ ಪ್ರಕಾಶನ, ಮಸ್ಕಿ, ರಾಯಚೂರು ಜಿಲ್ಲೆ - ೧೯೯೯

೧೦. ಧ್ರುವನಾರಾಯಣ : 'ಸ್ವಾತಂತ್ರ್ಯಾಂದೋಳನದಲ್ಲಿ ರಾಯಚೂರು ಜಿಲ್ಲೆ' ಕರ್ನಾಟಕ ಸಂಘ, ರಾಯಚೂರು ೧೯೭೩

೧೧. ದೇಸಾಯಿ ವಿ.ಎಚ್. : 'ವಂದೇ ಮಾತರಂದಿಂದ ಜನಗಣ ಮನದ ವರೆಗೆ' ಲೋಕಶಿಕ್ಷಣ ಟ್ರಸ್ಟ್, ಗ್ರಂಥಮಾಲೆ, ಹುಬ್ಬಳ್ಳಿ - ೧೯೯೮

೧೨. ನಲವಡಿ ಶ್ರೀ ಕಂಠಶಾಸ್ತ್ರಿ : 'ಹೈದರಾಬಾದ್ ರಜಾಕಾರರ ಲಾವಣಿ' ಪ್ರಸಾರಾಂಗ, ಕನ್ನಡ, ವಿ.ವಿ. ಹಂಪಿ. ೧೯೯೮

೧೩. ನಾಗರಾಜು ಕಾ.ಶ್ರೀ. : 'ಹೈದರಾಬಾದ್ ಮುಕ್ತಿಗಾಥೆ' ಸಾಹಿತ್ಯ ಸಿಂಧು ಪ್ರಕಾಶನ, ಮೈಸೂರು - ೧೯೯೮

೧೪. ಪಾಟೀಲ್ ಎಚ್.ಎಸ್. (ಸಂ) : 'ವಿಮೋಚನೆ' (ಕೊಪ್ಪಳ ಜಿಲ್ಲೆಯ ಹೈದರಾಬಾದ್ ವಿಮೋಚನ ಹೋರಾಟದ ಕಥೆ) ಜಿಲ್ಲಾ ಆಡಳಿತ, ಕೊಪ್ಪಳ, ೧೯೯೯

೧೫. ಪಾಟೀಲ್ ಎಚ್.ಎಸ್. (ಸಂ) : 'ತಿರುಳ್ಗನ್ನಡ' ಸವಿಸಂಚಿಕೆ ಸ್ವಾಗತ ಸಮಿತಿ, ೬೨ ನೆಯ ಅಖಿಲ ಭಾರತ ಕ.ಸಾ.ಸ., ಕೊಪ್ಪಳ ೧೯೯೩

೧೬. ಬಸವರಾಜ ಮಲಶೆಟ್ಟಿ : 'ಸ್ವಾತಂತ್ರ್ಯ ಹೋರಾಟ ಮತ್ತು ಲಾವಣಿ ಸಾಹಿತ್ಯ' ಪ್ರಸಾರಾಂಗ, ಕನ್ನಡ, ವಿ.ವಿ. ಹಂಪಿ, ೧೯೯೮

೧೭. ಮಹಾಬಲೇಶ್ವರಪ್ಪ ಬಿ. ಸಿ.: 'ಹೈದರಾಬಾದ್ ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳವಳಿ' ಪ್ರಸಾರಾಂಗ, ಗುಲ್ಬರ್ಗಾ, ವಿ.ವಿ. ಗುಲ್ಬರ್ಗಾ - ೧೯೯೯

೧೮. ಮಹಾಬಲೇಶ್ವರ ಬಿ.ಸಿ.: 'ಹೈದರಾಬಾದ್ ಕರ್ನಾಟಕದಲ್ಲಿ ರಾಜಕೀಯ ಚಳುವಳಿಗಳು' ಪ್ರಸಾರಾಂಗ, ಗುಲ್ಬರ್ಗಾ, ವಿ.ವಿ.ಗುಲ್ಬರ್ಗಾ - ೧೯೯೭

೧೯. ರಾಮಣ್ಣ ಹವಳೆ : 'ಸ್ವಾತಂತ್ರ್ಯ ಹೋರಾಟದಲ್ಲಿ ಗಜೇಂದ್ರಗಡ ಶಿಬಿರ' ಚೇತನ ಪ್ರಕಾಶನ, ರಾಯಚೂರು, ೧೯೯೬

೨೦. ರಾಮಣ್ಣ ಹವಳೆ : 'ಸ್ವಾತಂತ್ರ್ಯ ಸೇನಾನಿ ಪುಂಡಲೀಕಪ್ಪ ಜ್ಞಾನ ಮೋಠೆ' ಚೇತನ ಪ್ರಕಾಶನ, ರಾಯಚೂರು, ೧೯೯೮

೨೧. ಶಿವಾನಂದ ಗುಬ್ಬಣ್ಣನವರ : 'ಲಾವಣಿ ಸಾಹಿತ್ಯದಲ್ಲಿ ರಾಷ್ಟ್ರೀಯತೆ' ಅಕ್ಷಯ ಪ್ರಕಾಶನ, ಧಾರವಾಡ - ೧೯೯೧

೨೨. ಶಿವಾನಂದ ವಿ. (ಸಂ) : 'ಹೈದರಾಬಾದ್ ಕರ್ನಾಟಕದ ಭಾಗದ ಕನ್ನಡ ಶಿಲಾ ಶಾಸನಗಳು' ಬನಾರಸ್ ಹಿಂದು ವಿಶ್ವವಿದ್ಯಾಲಯ, ವಾರಣಾಸಿ, ೧೯೯೨

೨೩. ಸುಭಾಸಚಂದ್ರ ದೊಡ್ಡಮನಿ : 'ಹೈದರಾಬಾದ್ ವಿಮೋಚನ ಆಂದೋಲನದಲ್ಲಿ ಕಲಬುರ್ಗಿ ಜಿಲ್ಲೆ ಶಿಬಿರಗಳ ಪಾತ್ರ' (ಅಪ್ರಕಟಿತ ಎಂ.ಫಿಲ್ ಪ್ರಬಂಧ) - ೨೦೦೨

೨೪. ಸೂರ್ಯನಾಥ ಕಾಮತ್ (ಸಂ) : 'ಸ್ವಾತಂತ್ರ್ಯ ಸಂಗ್ರಾಮದ ಸ್ಮೃತಿಗಳು' ಸಂಪುಟ-೩ ಗೀತಾ ಬುಕ್‌ಹೌಸ್, ಮೈಸೂರು, ೧೯೭೭

ಇಂಗ್ಲಿಷ್

೧ Hallappa G.S.(Ed).:‘ Freedom for Progress’, Gulbarga, 1966

೨. Muniski K.M.: ' The end of an era' Bharateeya vidhya Bhavana, Bombay, 1957

೩. Tirthswami Ramananda : ‘Memories of Hyderabad'' Freedom struggle, Bombay State 1967

೪. Vande Mataram Ramachandra Rao : ‘Police Action on Hyderbad State’, 1969

ನಿಯತ ಕಾಲಿಕೆಗಳು

೧. ಪ್ರಜಾವಾಣಿ - ೧೩-೦೨-೧೯೯೭

೨. ಕನ್ನಡ ಪ್ರಭ - ೦೭-೦೯-೧೯೯೮

೩. ಸಂಯುಕ್ತ ಕರ್ನಾಟಕ - ೧೭-೦೯-೧೯೯೮ ಮತ್ತು ೧೭-೦೯-೨೦೦೩

೪. ವಿಜಯ ಕರ್ನಾಟಕ - ೧೭-೯-೨೦೦೩

೫. ಪ್ರಜಾವಾಣಿ - ೧೮-೦೯-೨೦೦೩

# ಹೈದರಾಬಾದ್ ಕರ್ನಾಟಕದ ಭೂಪಟ

(ರಜಾಕಾರರ ಹಾವಳಿಗೆ ತುತ್ತಾದ ಜಿಲ್ಲೆಗಳು)



## ಕೊಪ್ಪಳ ಜಿಲ್ಲೆಯ ಭೂಪಟ ಹಾಗೂ ಗಡಿಶಿಬಿರದ ಪ್ರದೇಶಗಳು





ವಿಮೋಚನ ಹೋರಾಟಗಾರರಾದ ಶ್ರೀ ಮುರುಡಿ ಭೀಮಜ್ಜ



ಮುಂಡರಗಿ ಶಿಬಿರದ ಶಿಬಿರಾಧಿಪತಿಗಳಾದ ಶ್ರೀ ಶಿವಮೂರ್ತಿಸ್ವಾಮಿ ಅಳವಂಡಿ



ಗಜೇಂದ್ರಗಡ ಶಿಬಿರದ ಶಿಬಿರಾಧಿಪತಿಗಳಾದ ಶ್ರೀ ಪುಂಡಲೀಕಪ್ಪ ಜ್ಞಾನಮೋಠೆ



ಕೊಪ್ಪಳ ಜಿಲ್ಲೆಯ ಗಡಿಶಿಬಿರಗಳ ಸಲಹೆಗಾರರು ಹಾಗೂ ವಿಮೋಚನ ಹೋರಾಟಗಾರರಾದ ಶ್ರೀ ವೀರಭದ್ರಪ್ಪ ಶಿರೂರು



ಹೈದರಾಬಾದ್ ಸಂಸ್ಥಾನದ ನಿಜಾಂ ಮೀರ್‌ಉಸ್ಮಾನ್ ಅಲಿಖಾನ್



ಕೊಪ್ಪಳ ಜಹಗೀರು ಜಿಲ್ಲೆಯ ನವಾಬ ಸಾಲರ್ ಜಂಗ್ ಬಹಾದ್ದೂರ್



ರಜಾಕಾರರ ನಾಯಕ ಕಾಶಿಂರಜ್ವಿ



ವಿಮೋಚನ ಹೋರಾಟಗಾರ ಎಸ್.ಎಂ.ಬಂಗಾರಶೆಟ್ಟರ್



ವಿಮೋಚನ ಹೋರಾಟಗಾರ ಇಟಗಿ ವಿರೂಪಾಕ್ಷಯ್ಯ





ರಾಷ್ಟ್ರೀಯ ಶಾಲೆ, ಗುರುಕುಲ ವಿದ್ಯಾಲಯ, ಕುಕನೂರು, ಕೊಪ್ಪಳ ಜಿಲ್ಲೆ (ಸ್ಥಾಪನೆ: ೧೯೨೨)

